





ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪೋಸು ಹೋದುವಲ್ಲ ||ಪ||
ಅಪಾರ ದಿನಗಳಿಂದ ಆರ್ಜನೆ ಮಾಡಿದ ||ಅ.ಪ.||

ಉರಗಾದ್ರಿಯಲಿ ಸ್ವಾಮಿ ಪುಷ್ಕರಿಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಮೈಮರೆತಿರಲು ಎನ್ನ ||೧||

ಪರಮ ಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸಿಗೆ ಬಂದೀಗ ||೨||

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರ ವಿಠಲನ
ಮಾಯದಿಂದಲಿ ಮತ್ತೆ ಮಾಯವಾದವು ಎನ್ನ ||೩||

--ಶ್ರೀ ಪುರಂದರದಾಸರು.

ಸಂದರ್ಶಿಸಿ. ಆನಂ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ
# ಶ್ರೀನಿವಾಸ ಮಂಗಾಪುರ.



# ವಾರ್ಷಿಕ ಬ್ರಹ್ಮೋತ್ಸವಗಳು

18--2--95 ರಿಂದ 27--2--95 ವರೆಗೆ

## ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 18--2--95 | ಶನಿವಾರ | ---- | ಅಂಕುರಾರ್ಪಣೆ. |
| 19--2--95 | ಭಾನುವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 20--2--95 | ಸೋಮವಾರ | ಚಿಕ್ಕ ಶೇಷವಾಹನ. | ಹಂಸವಾಹನ. |
| 21--2--95 | ಮಂಗಳವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ. |
| 22--2--95 | ಬುಧವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 23--2--95 | ಗುರುವಾರ | ಮೋಹಿನೀ ಅವತಾರ | ಗರುಡವಾಹನ. |
| 24--2--95 | ಶುಕ್ರವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 25--2--95 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 26--2--95 | ಭಾನುವಾರ | ರಥೋತ್ಸವ | ಅಶ್ವವಾಹನ. |
| 27--2--95 | ಸೋಮವಾರ | ಚಕ್ರಸ್ನಾನ | ಧ್ವಜಾವರೋಹಣ. |

ಸೂಚನೆ: ಶ್ರೀನಿವಾಸ ಮಂಗಾಪುರ ತಿರುಪತಿಯಿಂದ ಮದನಪಲ್ಲಿಯ ಹಾದಿಯಲ್ಲಿ ಹದಿಮೂರು ಕಿ.ಮೀ. ದೂರದಲ್ಲಿದೆ. ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಹೋಗಿಬರಬಹುದು. ಬಸ್ ಸೌಲಭ್ಯವುಂಟು. ಬ್ರಹ್ಮೋತ್ಸವದ ದಿನಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತ



ಗೌರವ ಸಂಪಾದಕರು:

ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಐ.ಎ.ಎಸ್,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ:

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ:

ಬಿ. ಎನ್. ಶ್ರೀನಿವಾಸನ್ ಎಂ. ಎ,

ಮುದ್ರಣ:

ಪಿ. ಮೋಹನ್ ರಾವ್, ಬಿ.ಎ.

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**



**ಸಂಪುಟ -- 25 ಜನವರಿ 1995 ಸಂಚಿಕೆ --8**

# ವಿಷಯಸೂಚಿ



ಮುಖ ಪುಟ : ಶ್ರೀ ಗೋದಾದೇವಿ -- ಚಿತ್ರ -- ಕೊಂಡಪಲ್ಲಿ ಶೇಷಗಿರಿರಾವ್.

ಹಿಂಬದಿಯಲ್ಲಿ: ಅಲಿಪಿರಿಯಲ್ಲಿನ ಗರುಡ ವಿಗ್ರಹ.

ಒಳಗಡೆ : 1) ಸಂಕ್ರಾಂತಿ -- ರೇಖಾಚಿತ್ರ -- ಜಗದೀಶ,

2) ಸ್ವಾಮಿ ವಿವೇಕಾನಂದರು.

ಮಧ್ಯವಿಸ್ತೃತಿ: ಸ್ವಾಮಿ ಶ್ರೀನಿವಾಸ






ಮಕರ ಸಂಕ್ರಾಂತಿ ಬಂದಿದೆ. ಸೂರ್ಯನ ಗತಿಯಲ್ಲಿನ ಬದಲಾವಣೆಗಳನ್ನು ಸಂಕ್ರಾಂತಿಯೆಂದು ಗುರುತಿಸುತ್ತ ಭೂಮಿಯ ದಕ್ಷಿಣಧ್ರುವದತ್ತ ಹೊರಡುವ ಕಾಲವನ್ನು ದಕ್ಷಿಣಾಯನವೆಂದೂ ಉತ್ತರಧ್ರುವದತ್ತ ಹೊರಡುವ ಕಾಲವನ್ನು ಉತ್ತರಾಯಣವೆಂದೂ ಕರೆಯಲಾಗುತ್ತದೆ. ಮಕರ ಸಂಕ್ರಾಂತಿಯಂದು ಉತ್ತರಾಯಣ ಆರಂಭವಾಗುತ್ತದೆ.

ಉತ್ತರ ದಕ್ಷಿಣಗಳೂ ಸಾಂಕೇತಿಕವೇ. ಆಕಾಶದಲ್ಲಿ ಉತ್ತರವೇನು ದಕ್ಷಿಣವೇನು. ಅದು ನೋಡುವ ಕಣ್ಣಿಗೆ ಮಾತ್ರವೇ ಅದು ಇರುವ ಸ್ಥಳದಿಂದ ನಿರ್ದೇಶಿತ ಆಗುವ ಭಾಗ. ಆದರೂ ದಕ್ಷಿಣವೆಂಬುದು ಅಧೋಲೋಕಗಳಿಗೂ ಉತ್ತರವೆಂಬುದು ಊರ್ಧ್ವಲೋಕಗಳಿಗೂ ಸಂಕೇತವಾಗಿ, ಪುರಾಣ ಪ್ರಪಂಚವನ್ನೂ, ಪರಂಪರೆಯನ್ನೂ ತುಂಬಿ ಪ್ರಚಲಿತದಲ್ಲಿದೆಯೆಂಬುದನ್ನು ಮಹಾಭಾರತದ ಶರಶಯ್ಯಾಗತ ಭೀಷ್ಮರ ಉತ್ತರಾಯಣದ ನಿರೀಕ್ಷೆಯಲ್ಲಿ ಕಾಣಬಹುದು.

ಸನಾತನ ಧರ್ಮದ, ಭಾರತೀಯ ಇತಿಹಾಸದಲ್ಲಿ 1863 ರ ಮಕರ ಸಂಕ್ರಾಂತಿ ವಿಶಿಷ್ಟವಾದದ್ದು ಎನ್ನಬೇಕು. ಅಂದು ಕಲ್ಕತ್ತೆಯ ಒಂದು ಮೂಲೆಯಲ್ಲಿ ವಿಶ್ವನಾಥದತ್ತರ ಮನೆಯಲ್ಲಿ ಒಂದು ಮಗು ಜನಿಸಿತು. ತಾಯಿ ಭುವನೇಶ್ವರೀ ದೇವಿಯ ಒಡಲು, ಕತ್ತಲಯುಗದಿಂದ ಬೆಳಕಿನೆಡೆಗೆ ಬರಲು ಭಾರತದ ಶತಮಾನಗಳ ತಪಸ್ಸಿನ ಪ್ರತೀಕವಾಗಿತ್ತು. ನರೇಂದ್ರದತ್ತನ ಜನನ ಸೂರ್ಯೋದಯಕ್ಕೆ ಮುಂಚೆ. ಆತ ಮುಂದೆ ವಿವೇಕಾನಂದನಾಗಿ ಭಾರತದ ಪುನರುತ್ಥಾನದ ಉತ್ತರಾಯಣದಲ್ಲಿ ಗುರುವಾದ.

ಇಲ್ಲಿನ ಸಂಕೇತಗಳನ್ನು ಗಮನಿಸಬೇಕು. ಒಂದೊಂದೂ ಕಾಕತಾಳೀಯವೆನ್ನಬಹುದಾದ ಬೇರೆ ಬೇರೆ ಘಟನೆಗಳು ಒಟ್ಟಾಗಿ ಸೇರಿ ಒಂದು ಸುಂದರ ಬೆಳಗನ್ನುಂಟುಮಾಡಿದ್ದು. ಶತಶತಮಾನಗಳ ದೈನ್ಯ ದಾಸ್ಯ ಕೀಳರಿಮೆಯಲ್ಲಿ ಕಂಗಾಲಾಗಿದ್ದ ಒಂದು ಜನಾಂಗಕ್ಕೆ ಉತ್ತರೋತ್ತರ ಅಭಿವೃದ್ಧವಾಗಲು ವೀರಸನ್ಯಾಸಿ ವಿವೇಕಾನಂದರು ನೀಡಿದ ಅವಧಾರಣೆಗೆ ಒತ್ತಾಯಕ್ಕೆ ಸಂಬಂಧಿಸಿದ್ದು -- ಆ ಮಕರ ಸಂಕ್ರಾಂತಿ ಸನಾತನ ಧರ್ಮದ ಉತ್ತರಾಯಣಕ್ಕೆ ಸಂಬಂಧಿಸಿದ್ದು ಎಂದು ಗಮನಿಸಬೇಕು.

ನರೇಂದ್ರ ಯಾವುದೋ ಒಂದು ಕ್ಷಣದಲ್ಲಿ ಜ್ಞಾನೋದಯ ಹೊಂದಿದ ಇತರ ಸಂತ ಸಾಧುಗಳಂತಲ್ಲ ಎಂಬುದನ್ನೂ, ಪ್ರಯತ್ನ ಪೂರ್ವಕ ಆಳವಾದ ಚಿಂತನೆ, ಮರುಚಿಂತನೆಗಳ ಮೂಲಕ ಮಾಗಿ, ವ್ಯಷ್ಟಿಯೊಡನೆ ಸಮಷ್ಟಿಯನ್ನೂ, ಬೌದ್ಧಿಕದೊಡನೆ ಭೌತಿಕವನ್ನೂ ಬಲಪಡಿಸಿಕೊಳ್ಳಬೇಕೆಂದು ಕಂಡುಕೊಂಡ ಆತ್ಮ ಅದು ಎಂಬುದನ್ನೂ ಗಮನಿಸಬೇಕು. ವಿವೇಕಾನಂದರಿಗೆ ಆರೋಗ್ಯಕರ ದೇಹದಲ್ಲಿ ಆರೋಗ್ಯಕರ ಮನವಿರಬೇಕು ಎಂಬುದು ಮುಖ್ಯವಾಯಿತು. ಎಂತಲೇ ಅವರು ನಾಡಿನ ಒಟ್ಟು ಪ್ರಗತಿ ಪ್ರತಿ ವ್ಯಕ್ತಿಯ ಪ್ರಗತಿಯೊಡನೆ ಜಡೆಗಂಟಾಗಿದೆ ಎಂಬುದನ್ನು ಮನಗಂಡರು. 'ಗುರಿ ಮುಟ್ಟುವನಕ ನಿಲ್ಲದಿರಿ' ಎಂಬ ಸಂದೇಶವನ್ನು ನೀಡಿದರು.

ಪ್ರಶ್ನೆ ಅವರದಲ್ಲ, ಅವರನ್ನು ನೆನೆಯುತ್ತ ನಡೆದಿರುವ ನಮ್ಮದು -- ಧರ್ಮವನ್ನು ದುರ್ಲಕ್ಷಿಸಿ, ಅಜ್ಞಾನ ಅಂಧಕಾರಗಳತ್ತ ನಡೆಯುತ್ತಿರುವ ನಮ್ಮದು ದಕ್ಷಿಣಾಯನ ಆರಂಭವಾಯಿತೇ --ಎಂಬಂತೆ ಪಥಭ್ರಾಂತರಾಗಿರುವ --ನಮ್ಮದು, "ಏಳಿ ಜಾಗೃತರಾಗಿ, ದೌರ್ಬಲ್ಯವನ್ನು ಕಳಚಿಹಾಕಿ" ಎಂಬ ಅವರ ಮಾತನ್ನು ಗಮನಿಸದೆ ಹೋಗಿರುವ ನಮ್ಮದು. ಇಂತಹ ಹೃದಯ ದೌರ್ಬಲ್ಯ ಹೋಗಿ ಸಂಕ್ರಾಂತಿ ಉತ್ತಾರಕವಾಗಬೇಕು ಉತ್ತರಾಯಣವಾಗಬೇಕು. ಅದಕ್ಕೆ ಸ್ವಾಮಿ ಶಕ್ತಿ ಬುದ್ಧಿಗಳನ್ನು ನೀಡಲೆಂದು ಬೇಡುವ.

ನಮಃ ಶ್ರೀಯತಿರಾಜಾಯ ವಿವೇಕಾನಂದ ಸೂರಯೇ
ಸಚ್ಚಿತ್ಸುಖರೂಪಾಯ ಸ್ವಾಮಿನೇ ತಾಪಹಾರಿಣೇ

* * * * *

# ವಿವೇಕವಾಣಿ

ಕನ್ನಡಾನುವಾದ :
**ಸ್ವಾಮಿ ಪುರುಷೋತ್ತಮಾನಂದ**
ಕೃಪೆ -- ತರಂಗ -- 19--9--93

ನೀವು ನಮಗೆ ನೀಡಿದ ಉತ್ಸಾಹಯುತ ಆದರದ ಸ್ವಾಗತಕ್ಕೆ ಪ್ರತಿಕ್ರಿಯಿಸಲು ಹೊರಟಾಗ ಅನಿರ್ವಚನೀಯ ಆನಂದವೊಂದು ನನ್ನ ಹೃದಯವನ್ನು ತುಂಬುತ್ತದೆ. ಪ್ರಪಂಚದ ಅತ್ಯಂತ ಪ್ರಾಚೀನವಾದ ಸನ್ಯಾಸಿಗಳ ಸಂಘದ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಬೌದ್ಧ ಧರ್ಮ ಜೈನ ಧರ್ಮಗಳೂ ಯಾವುದರ ಶಾಖೆಗಳು ಮಾತ್ರವೋ ಅಂತಹ ಸಕಲ ಧರ್ಮಗಳ ಮಾತೆಯ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಮತ್ತು, ವಿವಿಧ ಜಾತಿ ಮತಗಳಿಗೆ ಸೇರಿದ ಕೋಟ್ಯನುಕೋಟಿ ಹಿಂದುಗಳ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅಲ್ಲದೆ, 'ಇಲ್ಲಿ ಕಂಡುಬರುವಂತಹ ಸಹಿಷ್ಣುತಾ ಭಾವವನ್ನು ದೂರದೂರದ ದೇಶಗಳಿಂದ ಬಂದಿರುವ ಈ ಪ್ರತಿನಿಧಿಗಳು ತಮ್ಮೊಂದಿಗೆ ಒಯ್ದು ಪ್ರಸಾರ ಮಾಡುತ್ತಾರೆ' ಎಂದು ಸಾರಿದ ಈ ವೇದಿಕೆಯ ಮೇಲಿನ ಕೆಲವು ಭಾಷಣಕಾರರಿಗೂ ತನ್ನ ಕೃತಜ್ಞತೆಗಳು ಸಲ್ಲುತ್ತವೆ.

ಜಗತ್ತಿಗೆ ಸಹಿಷ್ಣುತೆಯನ್ನೂ ಸರ್ವಧರ್ಮಸ್ವೀಕಾರ ಭಾವವನ್ನೂ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನೆಂಬ ಹೆಮ್ಮೆ ನನ್ನದು. ನಾವು ಸರ್ವಮತ ಸಹಿಷ್ಣುತೆಯನ್ನು ಒಪ್ಪುತ್ತೇವಷ್ಟೇ ಅಲ್ಲದೆ, ಸಕಲ ಧರ್ಮಗಳೂ ಸತ್ಯವೆಂದು ನಾವು ನಂಬುತ್ತೇವೆ. ಯಾವ ಧರ್ಮದ ಪವಿತ್ರ ಭಾಷೆಗೆ 'ಎಕ್ಸ್‌ಕ್ಲೂಷನ್' (ಹೊರಗಿಡುವುದು, ಬಹಿಷ್ಕಾರ ಹಾಕುವುದು) ಎಂಬ ಪದವನ್ನು ಅನುವಾದಿಸಲು ಸಾಧ್ಯವೇ ಇಲ್ಲವೋ ಅಂತಹ ಧರ್ಮಕ್ಕೆ ಸೇರಿದ ಹೆಮ್ಮೆ ನನ್ನದು. (ಕರತಾಡನ) ಪ್ರಪಂಚದ ಎಲ್ಲ ಧರ್ಮಗಳ ಎಲ್ಲ ರಾಷ್ಟ್ರಗಳ ಸಂಕಟ ಪೀಡಿತ ನಿರಾಶ್ರಿತರಿಗೆ ಆಶ್ರಯವನ್ನಿತ್ತ ರಾಷ್ಟ್ರಕ್ಕೆ ಸೇರಿದವನೆಂಬ ಹೆಮ್ಮೆ ನನ್ನದು. ರೋಮನ್ನರ ದಬ್ಬಾಳಿಕೆಗೆ ಗುರಿಯಾಗಿ ತಮ್ಮ ಪವಿತ್ರ ದೇವಾಲಯವು ನುಚ್ಚು ನೂರಾದಾಗ ದಕ್ಷಿಣ ಭಾರತಕ್ಕೆ ವಲಸೆ ಬಂದ ಇಸ್ರೇಲೀಯರ ಒಂದು ಗುಂಪನ್ನು ನಮ್ಮ ಮಡಿಲಲ್ಲಿಟ್ಟುಕೊಂಡು ಆಶ್ರಯ ನೀಡಿದ್ದೇವೆ ಎಂದು ಹೇಳಲು ನನಗೆ ಹೆಮ್ಮೆ. ಘನ ಜರತುಷ್ಟ್ರ ಜನಾಂಗದ ಅವಶೇಷಕ್ಕೆ ಆಶ್ರಯವಿತ್ತ ಹಾಗೂ ಈಗಲೂ ಪೋಷಿಸುತ್ತಿರುವ ಧರ್ಮಕ್ಕೆ ನಾನು ಸೇರಿದವನೆಂಬುದು ನನ್ನ ಹೆಮ್ಮೆ

ಸೋದರರೇ, ನಾನು ಬಾಲ್ಯಾರಭ್ಯದಿಂದ ಪಠಿಸುತ್ತಿದ್ದ, ಮತ್ತು ಈಗಲೂ ಲಕ್ಷಾಂತರ ಹಿಂದೂಗಳು ಪಠಿಸುವ ಶ್ಲೋಕವೊಂದರಿಂದ ಕೆಲ ಸಾಲುಗಳನ್ನು ನಿಮಗೆ ಉದ್ಧರಿಸಿ ಹೇಳುತ್ತೇನೆ--

ತ್ರಯೀ ಸಾಂಖ್ಯಂ ಯೋಗಃ
ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ
ಪರಮಿದಮದಃ ಪಥ್ಯಮಿತಿ ಚ
ರುಚೀನಾಂ ವೈಚಿತ್ರ್ಯಾತ್
ಋಜು ಕುಟಿಲ ನಾನಾ ಪಥ ಜುಷಾಂ
ನೃಣಾಮೇಕೋ ಗಮ್ಯಃ
ತ್ವಮಸಿ ಪಯಸಾಂ ಅರ್ಣವ ಇವ

ಎಂದರೆ, ಭಿನ್ನ ಭಿನ್ನ ಸ್ಥಾನಗಳಿಂದುದಿಸಿದ ನದಿಗಳೆಲ್ಲ ಹರಿಯುತ್ತ ಹೋಗಿ ಕೊನೆಗೆ ಸಾಗರದೊಳಗೊಂದಾಗುವಂತೆ, ಹೇ ಪ್ರಭು, ಮಾನವರು ತಮ್ಮ ತಮ್ಮ ಅಭಿರುಚಿವೈಚಿತ್ರ್ಯಗಳಿಂದ ಅನುಸರಿಸುವ ಅಂಕುಡೊಂಕಿನ ದೇರೆ ದೇರೆ ದಾರಿಗಳೆಲ್ಲ ಕೊನೆಗೆ ನಿನ್ನನ್ನೇ ಬಂದು ಸೇರುತ್ತವೆ.

ಜಗತ್ತಿನಲ್ಲಿ ಇಲ್ಲಿಯವರೆಗೆ ನಡೆಸಲ್ಪಟ್ಟ ಮಹಾದ್ಭುತ ಸಮ್ಮೇಳನಗಳಲ್ಲೊಂದಾದ ಇಂದಿನ ಈ ಸಭೆಯು, ಭಗವದ್ಗೀತೆಯು ಬೋಧಿಸಿರುವ ಆ ಅದ್ಭುತ ತತ್ತ್ವಕ್ಕೆ ಸಾಕ್ಷಿಯಾಗಿದೆ, ಮತ್ತು ಅದನ್ನೇ ಸಾರುತ್ತದೆ--

ಯೇ ಯಥಾ ಮಾಂ ಪ್ರಪದ್ಯಂತೇ
ತಾಂಸ್ತಥೈವ ಭಜಾಮ್ಯಹಂ
ಮಮ ವರ್ತ್ಮಾನುವರ್ತಂತೇ
ಮನುಷ್ಯಾಃ ಪಾರ್ಥ ಸರ್ವಶಃ



--ಯಾರು ಯಾರು ನನ್ನಲ್ಲಿಗೆ ಯಾವಯಾವ ಮಾರ್ಗದಿಂದ ಬರುತ್ತಾರೋ ಅವರವರನ್ನು ನಾನು ಅದದೇ ಮಾರ್ಗದಿಂದ ತಲಪುತ್ತೇನೆ. ಮಾನವರು ಅನುಸರಿಸುವ ಮಾರ್ಗಗಳೆಲ್ಲ ಕೊನೆಯಲ್ಲಿ ನನ್ನನ್ನೇ ಬಂದು ಸೇರುತ್ತವೆ.

ಗುಂಪುಗಾರಿಕೆ, ಅತಿಯಾದ ಮತಾಭಿಮಾನ ಹಾಗೂ ಅದರ ಘೋರ ಪರಿಣಾಮವಾದ ಧರ್ಮಾಂಧತೆಗಳು ಬಹುಕಾಲದಿಂದ ಈ ಸುಂದರ ಸೃಷ್ಟಿಯನ್ನು ಆಕ್ರಮಿಸಿಕೊಂಡಿವೆ. ಅವು ಭೂಮಿಯನ್ನು ಹಿಂಸೆಯಿಂದ ತುಂಬಿ, ಮತ್ತೆ ಮತ್ತೆ ಮಾನವನ ರಕ್ತದಿಂದ ತೋಯಿಸಿವೆ; ನಾಗರಿಕತೆಯನ್ನು ನಾಶಮಾಡಿವೆ, ದೇಶದೇಶಗಳನ್ನೇ ನಿರಾಶೆಯ ಕೂಪಕ್ಕೆ ತಳ್ಳಿವೆ. ಆ ಘೋರ ರಾಕ್ಷಸತನವಿಲ್ಲದಿದ್ದಲ್ಲಿ ಮಾನವನ ಸಮಾಜವು ಈಗಿರುವುದಕ್ಕಿಂತಲೂ ಎಷ್ಟೋ ಹೆಚ್ಚು ಮುಂದುವರಿಯುತ್ತಿತ್ತು. ಆದರೆ ಈಗ ಆ ರಾಕ್ಷಸತನದ ಅಂತ್ಯಕಾಲ ಸಮೀಪಿಸಿದೆ. ಈ ಸಮ್ಮೇಳನದ ಪ್ರತಿನಿಧಿಗಳ ಗೌರವಾರ್ಥವಾಗಿ ಇಂದು ಬೆಳಗ್ಗೆ ಮೊಳಗಿದ ಗಂಟಾನಾದವು ಎಲ್ಲ ಮತಾಂಧತೆಗೆ ಮೃತ್ಯುಘಾತವನ್ನೀಯುವುದೆಂದು ಆಶಿಸುತ್ತೇನೆ. (ಕರತಾಡನ) ಮತ್ತು ಅದು ಖಡ್ಗ -- ಲೇಖನಿಗಳ ಮೂಲಕ ಸಂಭವಿಸುವ ಹಿಂಸಾದ್ವೇಷಗಳಿಗೆ, ಹಾಗೂ ಒಂದೇ ಗುರಿಯೆಡೆಗೆ ಸಾಗುತ್ತಿರುವ ಪಥಿಕರೊಳಗಿನ ಅಸಹನೆ -- ಮನಸ್ತಾಪಗಳಿಗೆ ಮೃತ್ಯುಘಾತವನ್ನೀಯುವುದೆಂದು ಹೃತ್ಪೂರ್ವಕವಾಗಿ ಆಶಿಸುತ್ತೇನೆ."

**ಸ್ವಾಮಿ ವಿವೇಕಾನಂದ**

ಚಿಕಾಗೋ, 11--9--1893



# ಸಂಕ್ರಾಂತಿ

ಅನಂತ ಚಿಂತಾಮಣಿ ಜ್ಯೋತಿಷೀ.

ಮಾನವನ ಬಾಳಿಗೆ ಸಂತಸದ ದೀವಿಗೆಯನ್ನು ಬೆಳಗಿಸುವ ಹಬ್ಬಗಳು ಆತನಿಗೆ ಸ್ಫೂರ್ತಿಯನ್ನು ಕೊಟ್ಟು ಕಾರ್ಯಪ್ರವೃತ್ತವನ್ನಾಗಿಸುತ್ತವೆ. ಪರಿಶುದ್ಧ ಸೌಖ್ಯದಲ್ಲಿ ಬದುಕನ್ನು ಸಾಗಿಸಲು ಸಾಧನಗಳೇ ಹಬ್ಬಗಳೆಂದು ಅರ್ಥೈಸಬಹುದಾಗಿದೆ. ಧಾರ್ಮಿಕ ಹಬ್ಬಗಳಲ್ಲಿ ಒಂದಾದ ಮಕರ ಸಂಕ್ರಮಣವು ಸಂತಸ ಸಂಭ್ರಮದ ಹಬ್ಬವಾಗಿದೆ. ಈ ಹಬ್ಬದ ಕಾಲವಿಜ್ಞಾನವು ಇಂತಿದೆ.

ಗ್ರಹಗಳ ಚಲನೆಯ ಮಾರ್ಗವನ್ನು ಕಾಂತಿವೃತ್ತ ಎನ್ನುತ್ತಿದ್ದು ಈ ವೃತ್ತವು ಮೇಷ ವೃಷಭ ಮೊದಲಾದ ೧೨ ರಾಶಿಗಳ ವಿಭಾಗವನ್ನು ಹೊಂದಿದೆ. ಸೂರ್ಯನು ಈ ೧೨ ರಾಶಿಗಳನ್ನು ಒಂದು ವರ್ಷದಲ್ಲಿ ಪರಿಕ್ರಮಿಸುತ್ತಾನೆ. (ಅವನ) ಸೂರ್ಯನ ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಹೋಗುವುದನ್ನು ಸಂಕ್ರಮಣ ಅಥವಾ ಸಂಕ್ರಾಂತಿ ಎಂದು ಕರೆಯಲಾಗುತ್ತಿದೆ. ೧೨ ರಾಶಿಗಳಲ್ಲಿಯ ಕರ್ಕದಿಂದ ಧನುರಾಶಿಯ ತನಕ ದಕ್ಷಿಣಾಯನವೆಂದೂ ಮಕರದಿಂದ ಮಿಥುನ ತನಕ ಉತ್ತರಾಯಣವೆಂದು ಕರೆಯುತ್ತಾರೆ. ಸೂರ್ಯನ ಮಕರ ಸಂಕ್ರಾಂತಿ ಉತ್ತರಾಯಣದ ಆರಂಭವಾಗಿದೆ. ಪ್ರತಿ ಸಂಕ್ರಾಂತಿಯ ದಿನವು ಮಹತ್ವದಾಗಿದ್ದು ಮೇಷ ಕರ್ಕ ತುಲಾ ಮಕರ ಸಂಕ್ರಾಂತಿಗಳಿಗೆ ಹೆಚ್ಚಗಿನ ಮಹತ್ವವು, ಕರ್ಕ ಮಕರಗಳಿಗೆ ಬಹು ವಿಶೇಷ ಮಹತ್ವವನ್ನು ಪ್ರಾಜ್ಞರು ನೀಡಿರುತ್ತಾರೆ. ಮಕರ ಸಂಕ್ರಾಂತಿಯು ದೇವತೆಗಳ ದಿನಾರಂಭವಾಗಿದ್ದರಿಂದ ಸರ್ವೋತ್ತಮ ದಿನವೆಂದು ತಿಳಿಯಲಾಗಿದೆ. ಧರ್ಮಶಾಸ್ತ್ರಗಳಲ್ಲಿ ಇಂಥ ಪವಿತ್ರ ದಿನದಲ್ಲಿ ಸ್ನಾನ ದಾನಾದಿಗಳು ಹೇಳಲ್ಪಟ್ಟಿವೆ. ಶುಕ್ಲಪಕ್ಷದಲ್ಲಿ ಸಪ್ತಮಿಯ ದಿನ ಈ ಸಂಕ್ರಾಂತಿ ಬಂದರೆ ಅದು ಗ್ರಹಣಕ್ಕಿಂತ ಅಧಿಕವೆಂದು ಮನ್ನಿಸಬೇಕು. ಸೂರ್ಯಪುತ್ರಿ ಯಮುನೆ ಹಾಗೂ ಭಗವಂತನ ಚರಣೋದಕರೂಪದ ಗಂಗೆಯಿಂದ ಕೂಡಿದ ನೀರಿನ ಸ್ನಾನವು ಈ ದಿನದಲ್ಲಿ ಸಮುಚಿತವಾಗಿದೆ.

ಮಕರಸಂಕ್ರಾಂತಿ ದಿನವಂದು ಷಣ್ಮಾಸಿಕ ಸೂರ್ಯಗತಿಯು ಸೃಷ್ಟಿಯ ಚರಾಚರ ಅಂಶಗಳಿಗೆ ಸುಖಕರವಾಗಬೇಕೆಂಬ ಇಚ್ಛೆಯಿಂದ ಮಕರ ಸಂಕ್ರಮಣದ ದಿನದಲ್ಲಿ ಸೂರ್ಯೋಪಾಸನೆಗೆ ಹೆಚ್ಚಗಿನ ಮಹತ್ವ ನೀಡಲಾಗಿದೆ. ಪರಮೇಶ್ವರಿಯು ಜಗದಂಬೆಯ ರೂಪದಿಂದ ಸಂಕರಾಸುರನನ್ನು ವಧಿಸಿ ಎಲ್ಲರಿಗೆ ಸುಖವನ್ನು ನೀಡಿದಳು ಎಂದು ಕಥೆಯಿದ್ದರೆ ಇನ್ನೊಂದು ಕಥೆಯು ಇಂತಿದೆ-- ಸೂರ್ಯನಿಂದ ಸೃಷ್ಟಿಸಲ್ಪಟ್ಟ ಕರ್ಕ ಮತ್ತು ಮಕರ ದೇವತೆಗಳಲ್ಲಿ ಒಂದಾದ ಮಕರ ದೇವತೆಯು ತಿಲಾಸುರನೊಡನೆ ಯುದ್ಧಮಾಡಿ ಈಟಿಯಿಂದ ತಿಲಾಸುರನ ಹೊಟ್ಟೆಯನ್ನು ತಿವಿದಳು. ಆಗ ತಿಲಾಸುರನ ಹೊಟ್ಟೆಯಿಂದ ಎಳ್ಳಿನ ರಾಶಿ ಹೊರಬಂದಿತು. ತಿಲಾಸುರನು ಮರಣಹೊಂದಿದಾಗ ಲೋಕದಲ್ಲಿ ಸಂತಸವೂ ಸಂಭ್ರಮವೂ ನೆಲೆಸಿತು. ಸೂರ್ಯನು ಪ್ರಸನ್ನನಾಗಿ ಮಕರ ದೇವಿಯನ್ನು ಉಪಾಸಿಸಿದವರಿಗೆ ಒಳಿತು ಉಂಟಾಗಲಿ. ಆಕೆಯಿಂದಲೇ ಲೋಕಕ್ಕೆ ಇಂದು ದೊರಕಿದ ಎಳ್ಳನ್ನು ಜನರು ಸುಧೆಯಂತೆ ಸವಿಯಲಿ ಎಂದು ವರವನ್ನು ಕೊಟ್ಟನು. ಹೀಗಾಗಿ ಎಳ್ಳು ಬೆಲ್ಲ ಹಂಚುವರು ಮತ್ತು ಎಳ್ಳನ್ನು ಅಂದು ಆರುವಿಧದಲ್ಲಿ ಬಳಸುವರು.

ದ್ರೋಣಪತ್ನಿ ಕೃಪಿಗೆ ಸಂಕ್ರಾಂತಿ ವ್ರತ ಮಾಡಲು ದುರ್ವಾಸ ಮುನಿಗಳು ಹೇಳಿದ್ದರೆಂದು ಮಾಹಾತ್ಮ್ಯವಿರುತ್ತದೆ. ಪೌಷದಲ್ಲಿ ಸೂರ್ಯನು ಮಕರಕ್ಕೆ ಹೋದಾಗ ಎಳ್ಳು ಹಚ್ಚಿ ಗಂಗಾಸ್ನಾನ ಮಾಡಬೇಕೆಂದಿದೆ. ಆಕಳ ಹಾಲು ಮೊಸರು ಎಳ್ಳು ಬೆಲ್ಲ ಬ್ರಾಹ್ಮಣರಿಗೆ ಕೊಡಬೇಕು. ಎಳ್ಳು ಬೆಲ್ಲ ಎಲ್ಲರಿಗೆ ನೀಡಬೇಕು. ತೇಜಾಧಿಪತಿ ಸೂರ್ಯನಾರಾಯಣನ ಸಂಕ್ರಮಣದ ಗತಿಯು ಸಕಲರಿಗೆ ಸುಖಕರವಾಗಲು ಪ್ರತಿಯೊಬ್ಬರು ಶಿಷ್ಟಾಚಾರವಾಗಿ ಆರಾಧನೆ ಮಾಡಬೇಕು.

ಮಕರ ಸಂಕ್ರಮಣವು ದೇವತೆಗಳಿಗೆ ಹಗಲು ರಾಕ್ಷಸರಿಗೆ ರಾತ್ರಿ ಆಗುವುದು. ಈ ಭಾವನೆಯಿಂದ ಎಳ್ಳು ಬೆಲ್ಲ ಹಂಚುತ್ತಾರೆ. ತಿಲಾಸುರನ ಸಂಹಾರ, ಸಂಕರಾಸುರನ ವಧೆಯ ಕುರಿತು ಪುರಾಣದ ಉಲ್ಲೇಖ ಕಂಡು ಬರದೆ ಇದ್ದದರಿಂದ ಪ್ರಾಜ್ಞರು ಮೂಲವನ್ನು ಶೋಧಿಸತಕ್ಕದ್ದು.

ದಾಕ್ಷಿಣಾತ್ಯರು ಮಕರ ಸಂಕ್ರಮಣವನ್ನು ಮೂರು ದಿವಸದಲ್ಲಿ ಆಚರಿಸುವರು. ಭೋಗಿಯು ಮೊದಲ ದಿನದ ಹಬ್ಬವಾಗಿದ್ದು ಋತುಗಳ ರಾಜನ
ಸುತ್ತಾರೆ. ಸಂಕ್ರಮಣದ ವೇಳೆಗೆ ಸೃಷ್ಟಿಯ
ಕ್ರಮದಲ್ಲಿ ಮಾರ್ಪಾಡು ಉಂಟಾಗುತ್ತದೆ.
ಎಲೆಗಳು ಹೋಗಿ ಹೊಸ ಎಲೆಗಳು
ಬರುವ ಕಾಲವು ಶುರುವಾಗುತ್ತದೆ. ಸೃ
ತಮ್ಮ ಬದುಕಿಗೂ ಹೊಸ ರೂಪ ಬರ
ಮೊದಲದಿನದ ಹಬ್ಬದಲ್ಲಿ ಋತುರಾಜನ
ಸುತ್ತಾರೆ. ಎರಡನೆಯ ದಿನ ಪೊಂಗಲ್.
ಸೂರ್ಯದೇವನ ಪ್ರೀತ್ಯರ್ಥ ಮಂಡಲವನ
ಪೂಜಿಸುವರು. ಪೊಂಗಲ್ ಎಂದರೆ ಹಾಲು
ಸಿಹಿತಿಂಡಿ ತಯಾರಿಸಿ ಪೂಜೆಯಲ್ಲಿ ನೈವೇ
ಸೂರ್ಯನಿಗೆ ಅರ್ಪಿಸುವರು. ಮರುದಿನ ದ
ಗಳ ಹಬ್ಬ. ಇಡೀ ವರ್ಷ ನಮ್ಮ ಜನರಿಗೆ ಉ
ಮಾಡಿದ ದನಕರುಗಳಿಗೆ ಗೌರವವನ್ನು
ವುದೇ ಮೂರನೇ ದಿನದ ಹಬ್ಬದ ಸಂಕೇತ
ಆಂಧ್ರಪ್ರದೇಶದಲ್ಲಿ ದಾಶರಥಿ ಶ್ರೀ ರಾಮಚ
ರಾವಣನನ್ನು ಸಂಹರಿಸಿ ಸೀತಾದೇವಿಯನ್ನು
ಕೊಂಡ ಬಂದ ದಿವಸವೆಂದು ತಿಳಿದು ಸಂ
ವನ್ನು ಆಚರಿಸುವರು.

ಒಟ್ಟಿನಲ್ಲಿ ಮಕರ ಸಂಕ್ರಮಣದ ದಿ
ಎಳ್ಳು ಬೆಲ್ಲವನ್ನು ಪರಸ್ಪರ ನೀಡಿ ಸವಿದು ನ
ತ್ತಾರೆ. ಸ್ನಿಗ್ಧತೆ ಮಾಧುರ್ಯದ ಸಂಗಮವಾದ
ಬೆಲ್ಲ ತಿಂದು ಒಳ್ಳೆ ಮಾತನಾಡೋಣ ಎಂದು
ಸುವ ಮಕರ ಸಂಕ್ರಮಣವು ಭಾವೈಕ್ಯತೆಯನ
ಮಾಡಿ ಸ್ನೇಹ ಸೇತುವೆ ಕಲ್ಪಿಸುವ ಹಬ್ಬವಾಗಿ



# ಮಕರ ಸಂಕ್ರಮಣ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ.

'ಎಳ್ಳು ಬೆಲ್ಲ ಹಂಚುತ್ತ, ಎಳ್ಳು ಬೆಲ್ಲದಂತೆಯೇ ಸಿಹಿಯಾಗಿ ಬಾಳೋಣ' ಎಂದು ಪ್ರತಿಯೊಬ್ಬರೂ ಹೇಳುವ ಸಂಕ್ರಾಂತಿ ಹಬ್ಬ ಭಾವೈಕ್ಯದ ಪ್ರತೀಕವಾಗಿದ್ದರೆ, ಹೊಸ ಧಾನ್ಯ ಬಂದು ಕಣಜತುಂಬುವ ಸುಗ್ಗಿಯ ದಿನಗಳಲ್ಲಿ ಬರುವ ಇದು ಸಮೃದ್ಧಿಯ ಸಂಕೇತವೂ ಆಗಿದೆ. "ಮನೆಯ ಸುಖವನ್ನೆಲ್ಲ ಬೀರಿ ಬನ್ನಿ. ಮನೆ ಮನೆ ಹರಕೆಯ ಕೊಂಡು ತನ್ನಿ....." ಎಂದು ವಿ. ಸೀ. ಯವರು ಹಾಡಿರುವ ಹಾಗೆ ಪರಸ್ಪರ ಕೊಟ್ಟುಕೊಳ್ಳುವುದು, ವೈಷಮ್ಯಮರೆಯುವುದು ಸಂಕ್ರಾತಿ ಹಬ್ಬದ ಮಹತ್ವ. ಸಂಕ್ರಾಂತಿ ಸುಗ್ಗಿಯ ಮೊದಲ ಹಬ್ಬ. ಸಂಕ್ರಾಂತಿಯ ಸಂಭ್ರಮದ್ವಿಗುಣಗೊಳ್ಳಲು ಸುಗ್ಗಿಯೇ ಸ್ಫೂರ್ತಿದಾಯಕ. ಈ ಹಬ್ಬದಂದು ಸಂತಸಪಡದವ ವರ್ಷವಿಡೀ ಖುಷಿ ಪಡಲಾರ ಎಂಬ ನಂಬಿಕೆಯ ಸಂಕ್ರಾಂತಿ, ಹಿಂದೂಗಳಿಗೆ ಅತ್ಯಂತ ಸಡಗರದ ಹಬ್ಬ.

ಪ್ರತಿಯೊಬ್ಬರೂ ಕೂಡಿಕೊಂಡು ಸಮರಸದಿಂದ ಬಾಳಿದರೆ ಬದುಕು ಬಂಗಾರವಾಗುತ್ತದೆ ಎಂಬ ಸಂದೇಶ ಸಾರುವ ಇಂಥಹ ಹಬ್ಬಗಳ ಆಚರಣೆ ಇಂದಿನ ದಿನಗಳಲ್ಲಿ ಅತ್ಯವಶ್ಯಕವಾಗಿದೆ.

## ಪುಣ್ಯಕಾಲ :

ಕಳೆದು ಭ್ರಾಂತಿ ತ ಳಿತು ಶಾಂತಿ ಹೊಳೆಯಿತು ಸಂಕ್ರಾಂತಿ! ಇಳೆಯೊಳಿಡಿದ ಕುಳಿರನಳಿದು ಬಲಿಯಲು ಹೊಸಕ್ರಾಂತಿ! ಎಳ್ಳನೇಹ ಎದೆಯೊಳಾಯ್ತು. ಬೆಲ್ಲದ ಸಿಹಿ ಸೊಲ್ಲೊಳಾಯ್ತು ಎಲ್ಲಿಯೂ ಸಮರಸದ ಗುರುತು ಶಾಂತಿ ಶಾಂತಿ ಶಾಂತಿ ! ಕವಿಯ ಈ ಹಾಡು ಸಂಕ್ರಾಂತಿ ಆಚರಣೆಯ ಪೂರ್ಣ ಅರ್ಥವನ್ನು ಕೊಡುತ್ತದೆ. ಸಂಕ್ರಾಂತಿ ಮುಖ್ಯವಾಗಿ ಋತುಮಾನಕ್ಕೆ ಸಂಬಂಧಿಸಿದ ಹಬ್ಬ. ಮಕರ ಸಂಕ್ರಾಂತಿ ಎಂದರೆ ಸೂರ್ಯನು ಉತ್ತರದಿಕ್ಕಿಗೆ ಪಯಣಿಸುವ ಉತ್ತರಾಯಣಕಾಲದ ಪ್ರಾರಂಭ. ಉತ್ತರಾಯಣ ಕಾಲ ಪುಣ್ಯದ ಕಾಲವಾಗಿದ್ದು ಪಿತೃಕಾರ್ಯವನ್ನು ನೆರವೇರಿಸಲು ಇದು ಒಳ್ಳೆಯ ಕಾಲ ಎಂದು ನಂಬಲಾಗಿದೆ. ಉತ್ತರಾಯಣ ಪುಣ್ಯಕಾಲಕ್ಕಾಗಿಯೇ ಇಚ್ಛಾಮರಣಿ ಭೀಷ್ಮರು ಬಾಣಗಳ ಮೇಲೆ ಮಲಗಿ ಕಾದರು ಎನ್ನುತ್ತಾರೆ. ಸ್ವರ್ಗದ ಬಾಗಿಲು ತೆರೆಯುವಕಾಲವೆಂಬ ನಂಬಿಕೆಯಿದೆ. ಇದಕ್ಕೂ ಒಂದು ಆಧಾರವಿದೆ. ಸಹಸ್ರಾರು ವರ್ಷಗಳ ಹಿಂದೆ ಆರ್ಯರು ಉತ್ತರ ಧ್ರುವ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಆಗ ಅಲ್ಲಿ ಆರುತಿಂಗಳು ಹಗಲು ಆರುತಿಂಗಳು ರಾತ್ರಿ ಇತ್ತು. ಸೂರ್ಯ ಉತ್ತರಕ್ಕೆ ಬರುವ ಹಗಲನ್ನು ತರುವ ಈ ಕಾಲವನ್ನು ಅವರು 'ಶ್ವೇತಗತಿ' ಎಂದು ಕರೆದು, ಅದು ಪುಣ್ಯದ ಕಾಲವೆಂದು ನಂಬಿದರು. ಸೂರ್ಯನು ದಕ್ಷಿಣಕ್ಕೆ ಹೋಗುವ ಅಂದರೆ ತಮ್ಮ ಕತ್ತಲೆಯ ಕಾಲವನ್ನು 'ಪ್ರೇತಗತಿ' ಎಂದು ಕರೆದರು. ಮಕರದಲ್ಲಾಗುವ ಸೂರ್ಯ ಸಂಕ್ರಮಣಕ್ಕೆ ನಮ್ಮಲ್ಲಿ ವಿಶೇಷ ವೈಶಿಷ್ಟ್ಯವಿದ್ದು, ಅಂಧಃಕಾರವನ್ನು ಕಳೆದು ಬೆಳಕನ್ನು ತರುವ, ಹಳೆಯದನ್ನು ಬಿಟ್ಟು ಹೊಸದನ್ನು ಪ್ರವೇಶಿಸುವ ಶುಭದಿನವೆಂದು ಅರಿಯಲಾಗಿದೆ.

## ಪೌರಾಣಿಕ ಹಿನ್ನೆಲೆ :

ಪ್ರತಿಯೊಂದು ಹಬ್ಬಕ್ಕೂ ಒಂದು ಪೌರಾಣಿಕ ಹಿನ್ನೆಲೆ ಇದೆ ಅನಿಸುತ್ತದೆ. ಹಾಗೆಯೇ ಈ ಸಂಕ್ರಾಂತಿ ಹಬ್ಬಕ್ಕೂ ಒಂದು ಹಿನ್ನೆಲೆ ಇದೆ. ಬ್ರಹ್ಮನ ವರದಾನ ಪಡೆದು ಉನ್ಮತ್ತನಾಗಿ ತ್ರಿಲೋಕ ಕಂಟಕನಾಗಿದ್ದ ತಿಲಾಸುರನೆಂಬ ರಾಕ್ಷಸನ ಪೀಡೆಯನ್ನು ಸಹಿಸಲಾರದೆ ಸರ್ವರೂ ಸೂರ್ಯದೇವನಿಗೆ ಮೊರೆಯಿಟ್ಟರು. ಆಗ ಸೂರ್ಯನಾರಾಯಣನು ಕರ್ಕ ಮತ್ತು ಮಕರ ಎಂಬಿಬ್ಬರು ಸ್ತ್ರೀಯರನ್ನು, ಅವರ ಸಹಾಯಕ್ಕಾಗಿ ಪರಿವಾರವನ್ನೂ ಸೃಷ್ಟಿಸಿದನು. ಇವರಿಗೂ ತಿಲಾಸುರ ರಕ್ಕಸನಿಗೂ ಭಯಂಕರ ಕಾಳಗ ನಡೆದು, ಕೊನೆಗೆ ಮಕರ ದೇವತೆಯು ತನ್ನ ಭಲ್ಲೆಯಿಂದ ರಕ್ಕಸನ ಹೊಟ್ಟೆಗೆ ತಿವಿಯಲು ಅವನ ಹೊಟ್ಟೆಯಲ್ಲಿ ಎಳ್ಳಿನ ಸಂಗ್ರಹ ಕಂಡು ಬಂದಿತು. ಅವನ್ನು ಹೊರತೆಗೆದಾಗ ಅವನ ಪ್ರಾಣ ಹಾರಿಹೋಯಿತು. ಸರ್ವರೂ ಸಂತಸಪಟ್ಟರು. ಸೂರ್ಯದೇವನು ಸಂತುಷ್ಟನಾಗಿ "ದೇವಿ! ನಿನ್ನನ್ನು ಭಕ್ತಿಯಿಂದ ಪೂಜಿಸಿದವರಿಗೆ ಸಂಪದಭಿವೃದ್ಧಿಯಾಗಲಿ. ನೀನು ಶೋಧಿಸಿದ ಎಳ್ಳು ಅಮೃತದಂತೆ ಸವಿಯಾಗಲಿ, ನಾನಿರುವವರೆಗೆ ನಿನ್ನ ಕೀರ್ತಿ ಉಳಿಯಲಿ" ಎಂದು ಹರಸಿದನಂತೆ. ಅಂದಿನಿಂದ ಪೀಡೆ ಪರಿಹಾರವಾಗುವುದಕ್ಕಾಗಿ ಎಳ್ಳು ಹಂಚುವ ಸಂಪ್ರದಾಯ ಬೆಳೆದು ಬಂತು ಎನ್ನಲಾಗಿದೆ.

## ಸಂಭ್ರಮದ ಹಬ್ಬ :

ಸಂಕ್ರಾಂತಿಯು ನಮ್ಮದೇಶದ ಸಂಭ್ರಮದ ಹಬ್ಬವಾಗಿದ್ದು ಅದನ್ನು ಭಾರತದ ಅನೇಕ ಕಡೆಗಳಲ್ಲಿ ಆಚ



ರಿಸುತ್ತಾರೆ. ಬಂಗಾಳ, ಉತ್ತರಪ್ರದೇಶ, ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ, ಕೇರಳ ಮುಂತಾದ ರಾಜ್ಯಗಳಲ್ಲಿ ಸಂಕ್ರಾಂತಿಯನ್ನು ಅತ್ಯಂತ ವೈಭವದಿಂದ ಆಚರಿಸುತ್ತಾರೆ. ಮಹಾರಾಷ್ಟ್ರದಲ್ಲಿ "ತಿಳಗೊಳ್ಗ್ಯಾ ವರ್ಷ ಭರ್ ಗೋಡ್ ಬೋಲ (ಎಳ್ಳು ಬೆಲ್ಲ ತಕ್ಕೊಂಡು ವರ್ಷವೆಲ್ಲ ಸಿಹಿ ಮಾತಾಡಿ) ಎಂದು ಪರಸ್ಪರ ಅಂದುಕೊಳ್ಳುತ್ತಾರೆ. ಕೇರಳದಲ್ಲಿ ಲಕ್ಷಾಂತರ ಯಾತ್ರಿಗಳು "ಮಕರ ವಿಳಕ್ಕು" ಎಂಬ ಅಲೌಕಿಕ ಜ್ಯೋತಿಯನ್ನು ದರ್ಶಿಸಲು ಶಬರಿ ಮಲೈಗೆ ಹೋಗುತ್ತಾರೆ. ಕೆಲವು ಕಡೆ ಮದುವೆಯಾದ ಹೊಸ ವರ್ಷದಲ್ಲಿ ಕುಸುರೆಳ್ಳಿನ ಆಭರಣಗಳನ್ನು ಕಲಾತ್ಮಕವಾಗಿ ನಿರ್ಮಿಸಿ ನೆಂಟರಿಗೆ (ಬೀಗರಿಗೆ) ಕೊಡುತ್ತಾರೆ. ಚಿಕ್ಕ ಮಕ್ಕಳನ್ನು ಕುಸುರೆಳ್ಳಿನ ಹಾರಗಳಿಂದ ಸಿಂಗರಿಸುತ್ತಾರೆ. ಕಾಶಿ, ಪ್ರಯಾಗ ಮುಂತಾದ ಕ್ಷೇತ್ರಗಳಲ್ಲಿ ಎಳ್ಳೆಣ್ಣೆಯನ್ನು ಮೈಗೆ ಹಚ್ಚಿಕೊಂಡು ತೀರ್ಥಸ್ನಾನ ಮಾಡಿ ಎಳ್ಳಿನಿಂದ ತಯಾರಿಸಿದ ಪಕ್ವಾನ್ನಗಳನ್ನು ತಿನ್ನುತ್ತಾರೆ. ಕರ್ನಾಟಕದ ಕೊಡಗಿನಲ್ಲಿ ಸಂಕ್ರಾಂತಿಯಂದು ಹುತ್ತರಿ ಹಬ್ಬವನ್ನು ಆಚರಿಸುತ್ತಾರೆ. ಮಳೆಸುರಿಸಿ ಹೊನ್ನಿನ ಬೆಳೆ ಕರುಣಿಸಿದ 'ಇಗ್ಗು ತಪ್ಪ' ಈ ಹಬ್ಬದ ದೇವತೆ. ತಮಿಳು ನಾಡಿನಲ್ಲಿ ಸಂಕ್ರಾಂತಿಯನ್ನು 'ಪೊಂಗಲ್' ಎಂದು ಕರೆಯುತ್ತಾರೆ. ಇದು ಆ ರಾಜ್ಯದ ಅತಿದೊಡ್ಡ ಹಬ್ಬ. ಸಂಕ್ರಾಂತಿಯ ಹಿಂದಿನ ದಿನ ಭೋಗಿ ಹಬ್ಬ ಆಚರಿಸುತ್ತಾರೆ. ಇದು ಹಿಂದಿನದೆಲ್ಲವನ್ನೂ ಶುಚಿಗೊಳಿಸಿ, ನಾಳೆಯ ಹೊಸತನಕ್ಕೆ ಸಿದ್ಧವಾಗುವ ದಿನ. ಹೊಸದನ್ನು ಸ್ವಾಗತಿಸಲು ಮನೆಗೆ ಸುಣ್ಣ ಬಣ್ಣ ಹಚ್ಚಿ ನೆಲ ಸಾರಿಸಿ ಅಕ್ಕಿ ಹಿಟ್ಟಿನಿಂದ ರಂಗೋಲಿ ಹಾಕುತ್ತಾರೆ. ಬೇಡದ ಹಳೆಯ ವಸ್ತುಗಳನ್ನೆಲ್ಲಾ ಬಿಸಾಡುತ್ತಾರೆ. ಇಂಥಹ ವಸ್ತುಗಳನ್ನು ಸಂಗ್ರಹಿಸಿ ಹಳ್ಳಿಯ ಹೊರ ಬಯಲಿನಲ್ಲಿ ರಾಶಿ ಹಾಕಿ ರಾತ್ರಿಯ ಹೊತ್ತು ಸುಟ್ಟು ಹಾಕುತ್ತಾರೆ.

## ಭೋಗಿ ಹಬ್ಬ :

ಬಾಲಕರು "ಭೋಗಿಕುಟ್ಟು" ಎಂಬ ವಾದ್ಯವನ್ನು ಬಾರಿಸುತ್ತಾರೆ. ಭೋಗಿ; ಋತುಗಳ ದೇವತೆ ಇಂದ್ರನಿಗೆ ಸಂಬಂಧಿಸಿದ ಹಬ್ಬ. ಪ್ರಕೃತಿ ಮಾತೆ ಹಸಿರುಡುಗೆ ಉಟ್ಟು ಹೊಸತನ ಹೊಂದುತ್ತಿರುವಾಗ ನಾವು ಕೂಡ ಹಳೆಯದನ್ನು ತೊರೆದು ಹೊಸತನವನ್ನು ಆರಂಭಿಸುವ ಕಾಲವಿದು. ಭೋಗಿಯ ಮರುದಿನ ಎಲ್ಲೆಲ್ಲೂ ಶುಭ್ರತೆ, ಸಂಭ್ರಮ, ಅಂಡಾಳ್ ವಿಷ್ಣುವನ್ನು ಸೇರಿದುದರ ಸಂಕೇತವಾಗಿ ಹುಡುಗಿಯರು "ತಿರುಪ್ಪಾವೈ" ಹಾಡುತ್ತಾರೆ. ಸಂಕ್ರಾಂತಿ ಸೂರ್ಯನ ಹಬ್ಬ. ಪೊಂಗಲ್‌ದಲ್ಲೂ ಸೂರ್ಯನಿಗೆ ಅಗ್ರಸ್ಥಾನವಿದೆ. ತಮಿಳರು ಪೊಂಗಲ್ ದಿನದಂದು ರಂಗೋಲಿಯಲ್ಲಿ ಸೂರ್ಯನ ಚಿತ್ರ ಬಿಡಿಸಿ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. 'ಸಕ್ಕರೆ ಪೊಂಗಲ್' ಅಂದಿನ ವಿಶೇಷ. ಹೊಸ ಪಾತ್ರೆಯಲ್ಲಿ ಹಾಲುಕ್ಕಿಸಿ, ಹೊಸ ಅಕ್ಕಿ ಬೆಲ್ಲ ಹಾಕಿ ಪೊಂಗಲ್ ತಯಾರಿಸುತ್ತಾರೆ. ಅದನ್ನು ಮೊದಲು ಸೂರ್ಯನಿಗೆ ಅರ್ಪಿಸುತ್ತಾರೆ. ಪೊಂಗಲ್ ಹಬ್ಬದ ಮರುದಿನ 'ಮಾಟ್ಟು ಪೊಂಗಲ್' ಆಚರಿಸುತ್ತಾರೆ. ತಮಿಳಿನಲ್ಲಿ ಮಾಟು ಎಂದರೆ 'ಎತ್ತು' (ಹೋರಿ) ಎಂದರ್ಥ. ಎತ್ತುಗಳಿಗೆ ಅಲಂಕಾರಮಾಡಿ ಮೆರವಣಿಗೆ ಮಾಡುತ್ತಾರೆ. ಸಂಜೆ ಎತ್ತಿನ ಗಾಡಿನಗಳನ್ನು ಓಡಿಸುವ ಸ್ಪರ್ಧೆಯೂ ಇರುತ್ತದೆ.

## ಸಮೃದ್ಧಿ ಸಮರಸದ ಸಂಕೇತ :

ಸಂಕ್ರಾಂತಿ -- ಮುಖ್ಯವಾಗಿ ರೈತರ ಹಬ್ಬ -- ಸುಗ್ಗಿಯ ಹಬ್ಬ. ಗಿಡ ಮರಗಳು ಚಿಗುರೊಡೆದು, ಪ್ರಕೃತಿ ಮಾತೆ ಹೊಸ ಹಸಿರುಡುಗೆ ಉಡುತ್ತಿರುವ ಕಾಲವಿದು. ಪ್ರಕೃತಿ ಮಾತೆಯ ಮುಡಿಯೇರಲು ಸಿದ್ಧವಾಗಿರುವ ಹೂಗಳ ರಾಶಿ, ಹಕ್ಕಿಗಳ ಆನಂದದ ಚಿಲಿಪಿಲಿಯೊಂದಿಗೆ ಮನೆಗೆ ಧಾನ್ಯ ಬರುವ, ಕಣಜ ತುಂಬುವ ಕಾಲವಿದು. ರೈತರು ತಮ್ಮ ಸುಗ್ಗಿಯ ಹಿಗ್ಗನ್ನು ಹೊಸ ಧಾನ್ಯದ ಹುಗ್ಗಿಮಾಡುವುದರ ಮೂಲಕ ತೋರಿಸುತ್ತಾರೆ. ಧರಣಿಯ ಮೇಲೆ ಹಾಲುಕ್ಕಿಸಿ ಹೊಸ ಅಕ್ಕಿಯ ಪಾಯಸಮಾಡುತ್ತಾರೆ. ತಮಿಳುನಾಡಿನಲ್ಲಿ ಆಚರಿಸುವ ಹಬ್ಬ 'ಪೊಂಗಲ್' ಎಂಬುದರ ಅರ್ಥ 'ಉಕ್ಕಿ ಹರಿಯುವುದು' ಅಂದರೆ ಸಂಕ್ರಾಂತಿಯನ್ನು ಸುಗ್ಗಿಯ ಹಬ್ಬವನ್ನಾಗಿ, ಸಮೃದ್ಧಿಯ ಸಂಕೇತವನ್ನಾಗಿ ಆಚರಿಸಲಾಗುತ್ತಿದೆ.

ಕರ್ನಾಟಕದ ಅನೇಕರು ಸಂಕ್ರಾಂತಿಯನ್ನು 'ಎಳ್ಳು ಬೀರುವ ಹಬ್ಬ' ಎಂದೂ ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಕುಸುರೆಳ್ಳು ಮಾಡುವುದೇ ಒಂದು ಸಂಭ್ರಮ, ಸಣ್ಣಮಕ್ಕಳಿಗೆ, ಮದುಮಕ್ಕಳಿಗೆ ಕುಸುರೆಳ್ಳಿನ ಬಗೆ ಬಗೆಯ ಆಭರಣಗಳನ್ನು ಮಾಡಿ ನೀಡುತ್ತಾರೆ. ಕರ್ನಾಟಕದಲ್ಲಿ ಸಂಕ್ರಾಂತಿಯನ್ನು ಮೂರು ದಿನ ಆಚರಿಸುತ್ತಾರೆ. ಮೊದಲ ದಿನ ಭೋಗಿ ಹಬ್ಬ, ಮರುದಿನ ಸಂಕ್ರಾಂತಿ. ಈ ದಿನ ಕೆಲವೆಡೆ ಮಕ್ಕಳ ತಲೆಯ ಮೇಲೆ ಮಂಡಾಸು ಬೋರೆ ಹಣ್ಣು, ಕಬ್ಬಿನತುಂಡು, ಸುರಿದು ಆರತಿ ಮಾಡುತ್ತಾರೆ. ಮಕ್ಕಳು ಮನೆಮನೆಗೆ ಹೋಗಿ ಎಳ್ಳು ಬೆಲ್ಲ ಹಂಚುತ್ತಾರೆ. ಹಿಂದೆ ಪರಸ್ಪರ ವೈಮನಸ್ಸು ಉಂಟಾಗಿದ್ದಲ್ಲಿ ಸಂಕ್ರಾಂತಿಯ ದಿನ ಎಳ್ಳು ಬೆಲ್ಲದ ಸಿಹಿಹಂಚಿ ಹಿಂದಿನದನ್ನು ಮರೆತು "ನಾವಿಬ್ಬರೂ ಎಳ್ಳು ಬೆಲ್ಲದಂತೆ ಸಿಹಿಯಾಗಿರೋಣ" ಎಂದು ಹೇಳಿಕೊಳ್ಳುತ್ತಾರೆ. ಎಳ್ಳು ಬೆಲ್ಲ ಹಂಚುವುದರಲ್ಲಿಯೂ ಒಂದು ಅರ್ಥವಿದೆ. ಎಳ್ಳಿನಲ್ಲಿ ಸ್ನಿಗ್ಧತೆ ಎಂದರೆ ಸ್ನೇಹಗುಣವಿದ್ದರೆ, ಬೆಲ್ಲದಲ್ಲಿ ಮಾಧುರ್ಯವಿದೆ. ಇವೆರಡರ ಸಮ್ಮಿಲನ ಅಮೃತದಂತೆ ರುಚಿಕರ. ಈ ಎಳ್ಳು ಹಾಗೂ ಬೆಲ್ಲ ಹಂಚಿಕೊಂಡರೆ ಸ್ನೇಹ ಬೆಳೆಯುತ್ತದೆ ವಿಶ್ವಾಸ ಕೆಲವು ಕಡೆ. ಮಗು ಹುಟ್ಟಿದ ಮೊ ವರ್ಷವಾಗಿದ್ದರೆ ಕೊಬ್ಬರಿ ಬಟ್ಟಲು, ಸಕ್ಕರೆ ಬಟ್ಟ ಬೆಳ್ಳಿ ಬಟ್ಟಲು, ಹಿತ್ತಾಳೆ ಬಟ್ಟಲು, ಸಕ್ಕರೆ ಅ ಬಟ್ಟಲು ಹೀಗೆ ಐದು ಬಗೆಯ ಬಟ್ಟಲುಗಳನ್ನು ಪಕ್ಷ ಐದು ಮನೆಗೆ ಎಳ್ಳಿನ ಜೊತೆಗೆ ಕೊ ಸಂಪ್ರದಾಯವಿದೆ. ಸಂಕ್ರಾಂತಿ ಎಳ್ಳಿನಲ್ಲಿ ನೆಲಗಡಲೆ ಪುಟಾಣಿ, ಕೊಬ್ಬರಿ ತುಂಡುಗಳೆಲ್ಲ ವಾಗಿರುತ್ತವೆ. ಇವೆಲ್ಲಕ್ಕೂ ಒಂದೊಂದು ರುಚಿಯೇ ಇದೆ. ಆದರೆ ಇವೆಲ್ಲವುಗಳನ್ನು ಒಟ್ಟಿಗೆ ತಿಂದಾಗ ಸಿಗುವ ರುಚಿ ಅತ್ಯಂತ ಸಿಹಿಯಾಗಿರು ಸರ್ವರೂ ಬೆರೆತು ಬಾಳಿದರೆ ಬದುಕಿನ ಸವಿ ಅ ಎಂಬುದನ್ನು ಹೇಳುವ ಸಂಕ್ರಾಂತಿ ಸಮರಸ ಬ ಕಿನ ಸಂಕೇತವೂ ಆಗಿದೆ.

## ಗೋಪೂಜೆ :

ಸಂಕ್ರಾಂತಿಯ ಮೂರನೇ ದಿನ ಗೋಪೂಜೆ ಯುತ್ತದೆ. ಕೃಷ್ಣನು ಗೋವರ್ಧನಗಿರಿಯ ಎತ್ತಿ ಗೋಕುಲವನ್ನು ರಕ್ಷಿಸಿದುದರ ಪ್ರತೀಕ ಹಬ್ಬ. ಅಂದು ಎತ್ತು ಹಾಗೂ ಹಸುಗಳಿಗೆ ಸ್ನಾನಮಾಡಿಸಿ ಕೊಂಬುಗಳಿಗೆ ಬಣ್ಣಹಚ್ಚಿ, ಅಲಂಕಾರಮಾ ಪೂಜೆಮಾಡಿ ಗೋಗ್ರಾಸ ನೀಡುತ್ತಾರೆ. ಮೆರವ ಮಾಡುತ್ತಾರೆ. ಅನೇಕ ಕಡೆಗಳಲ್ಲಿ ದೃಷ್ಟಿ ಪರಿಹಾ ವೆಂದು ಕಿಚ್ಚು ಹಾಯಿಸುತ್ತಾರೆ. ವರ್ಷವಿಡೀ ತ ಗಾಗಿ ದುಡಿದ ದನಕರುಗಳನ್ನು ಪೂಜಿಸಿ ಕೃತಜ್ಞ ತೋರಿಸುತ್ತಾರೆ.

ಎಳ್ಳು -- ಬೆಲ್ಲಾ ಕೊಳ್ಳಿ, ಒಳ್ಳೊಳ್ಳೆ ಮಾತಾ ಸುಳ್ಳೀಗೆ ಸೊಟರೀಗೆ ಕಿವಿಗೊಡದೆ ಕಳ್ಳು -- ಬಳ್ಳಿ ಗೊಗೆದ ಹೂವಾಗಿ ಬಾಳೋಣ. ಜಳ್ಳನು ಗಾಳಿ ತೂರೋಣ".

ಚೆನ್ನವೀರ ಕಣವಿಯಯವರು ಹೇಳಿರುವ ಈ ಹಾಡು ಸಂಕ್ರಾಂತಿ ಹಬ್ಬದ ಮಹತ್ವವನ್ನು ಎತ್ತಿತೋ ರಿಸಿದೆ. ಭಾವೈಕ್ಯತೆ, ಪ್ರಕೃತಿ ಆರಾಧನೆ, ರೈತನ ಸಂ ಮದ ಸುಗ್ಗಿ, ತನಗೆ ಸಹಕಾರಿಯಾದ ಪಶುಗಳ ಕೃತಜ್ಞತೆಗಳ ಪ್ರತೀಕವಾಗಿರುವ ಸಂಕ್ರಾಂತಿ ಅರ್ಥ ವತ್ತಾದ ಆಚರಣೆ. ಇಡೀ ಜಗತ್ತೇ ಅಶಾಂತಿಯ ಜ್ವಾಲಾಮುಖಿಯ ಮೇಲೆ ಕುಳಿತಿರುವ ಇಂದಿನ ದಿನಗಳಲ್ಲಿ ಇಂಥಹ ಆಚರಣೆಗಳ ಅವಶ್ಯಕತೆ ಯಿದೆ. ಬನ್ನಿ, ನಾವೆಲ್ಲ ಎಳ್ಳು ಬೆಲ್ಲ ತಿಂದು ಸಮರಸದ ಬದುಕನ್ನು ಬಾಳೋಣ.



# ಆಚಾರ್ಯರು ಕಂಡ ಶ್ರೀನಿವಾಸ

ಶ್ರೀ ವೈಷ್ಣವ ಸಿದ್ಧಾಂತದಲ್ಲಿ ಆಳ್ವಾರುಗಳು ಮತ್ತು ಆಚಾರ್ಯರುಗಳೆಂದು ಎರಡು ವರ್ಗಗಳಿವೆ. ಈ ಸಿದ್ಧಾಂತಕ್ಕೆ ಮೂಲದ್ರವ್ಯ ಒದಗಿಸಿದವರು ಆಳ್ವಾರುಗಳಾದರೆ, ಆ ದ್ರವ್ಯ ಸಹಾಯದಿಂದ ಈ ಸಿದ್ಧಾಂತ ಘೋಷಣೆ ನಡೆಸಿದ ಮಹಾನ್‌ಗಳು ಆಚಾರ್ಯರು, ಎಂದರೆ ವೇದೋಪನಿಷತ್ ಪುರಾಣಗಳಿಂದಲೂ ಆಳ್ವಾರ್‌ಗಳ ದಿವ್ಯಪ್ರಬಂಧಗಳಿಂದಲೂ ಪ್ರೇರೇಪಣೆ ಹೊಂದಿದ ಈ ಆಚಾರ್ಯರುಗಳು, ಶ್ರೀವೈಷ್ಣವಸಿದ್ಧಾಂತವನ್ನು ಸುಭದ್ರ ಬುನಾದಿಯ ಮೇಲೆ ನಿರ್ಮಿಸಿ ಅಪ್ರತಿಮ ಗೌರವಭಾಜನರಾದರು. ಅವರೂ ದೈವ ಪಟ್ಟವನ್ನು ಹೊಂದಿದರು. ಆಳ್ವಾರುಗಳ ಕಾಲ ಕ್ರಿ.ಶ. ೯ಕ್ಕೆ ಮುಗಿದಿದ್ದರೆ ಆಚಾರ್ಯರ ಕಾಲ ೧೦ ರಿಂದ ಪ್ರಾರಂಭಗೊಂಡು ೧೬ ನೇ ಶತಮಾನದವರೆಗೂ ಮುಂದುವರೆಯಿತು. ಈ ಪರಂಪರೆಗೆ ಮೊದಲನೆಯವರು ನಾಥಮುನಿಗಳು, ಕಡೆಯವರು ಮಣವಾಳಮಹಾಮುನಿಗಳು. ನಂತರ ಯಾವ ಆಚಾರ್ಯರೂ ಅವತರಿಸಲೇ ಇಲ್ಲವೇ ಎಂದು ಕೇಳಿದರೆ ಅದು ಅವಿವೇಕವಾದೀತು. ಆ ನಂತರ ಬಂದ ಆಚಾರ್ಯರು ಈ ಹಿಂದಿನ ಗುರುಗಳ ಅಪ್ರತಿಮ ಕಾರ್ಯಚತುರತೆಗೆ ಗೌರವ ತೋರಿಸಲೆಂದೇ ಆಚಾರ್ಯ ಮಣವಾಳ ಮಹಾಮುನಿಗಳವರೆಗೇ ಆಚಾರ್ಯ ಪರಂಪರೆಯೆಂದು ತೀರ್ಮಾನಿಸಿಬಿಟ್ಟಿದ್ದಾರೆ ಅಷ್ಟೇ.

ಆಳ್ವಾರುಗಳು ತಮ್ಮ ದಿವ್ಯ ಪ್ರಬಂಧಗಳಲ್ಲಿ ತಿರುಮಲೆಗೂ ಅದರ ಒಡೆಯನಿಗೂ ಪ್ರಧಾನಸ್ಥಾನ ನೀಡಿ ತಮ್ಮ ಪಾಶುರಗಳೆಂಬ ನುತಿಮಾತುಗಳಿಂದ ಅವನನ್ನು ಅಲಂಕರಿಸಿ ಆನಂದಪಟ್ಟು ಧನ್ಯರಾಗಿದ್ದಾರೆ. ಅವರ ಪಾಶುರಗಳೆಲ್ಲ ತಮಿಳಿನವು, ನಂತರದ ಆಚಾರ್ಯರುಗಳೂ ಕೂಡ ತಿರುಪತಿಯೊಡೆಯ ಶ್ರೀನಿವಾಸನನ್ನು ತಮ್ಮ ಸ್ತೋತ್ರ, ಪ್ರಬಂಧಗಳ ಮೂಲಕ ಸಂಕೀರ್ತಿಸಿ ದಣಿದಿದ್ದಾರೆ. ಆದರೆ ಅವುಗಳ ಪ್ರಮಾಣ ಆಳ್ವಾರುಗಳ ಸಮರ್ಪಿಸಿರುವ ಪಾಶುರಗಳಷ್ಟು ಆಗುವುದಿಲ್ಲವೆನ್ನಬಹುದು, ಆಚಾರ್ಯರುಗಳು ಬಹುತೇಕ ಈ ಶ್ಲೋಕಗಳನ್ನು ಸಂಸ್ಕೃತದಲ್ಲೇ ನಿರ್ಮಿಸಿದ್ದಾರೆ. ಆಳ್ವಾರುಗಳ ಪಾಶುರಗಳಲ್ಲಿ ನಾವು ಕಾಣುವ ಐತಿಹಾಸಿಕ, ಸಾಂಸ್ಕೃತಿಕ, ಪೌರಾಣಿಕ ವಿವರಣೆಗಳನ್ನು ಇಲ್ಲಿ ನಾವು ಕಾಣಲಾರೆವು. ಕೇವಲ ಶ್ರೀನಿವಾಸನಲ್ಲಿ ದೈವಭಕ್ತಿಯೊಂದನ್ನೇ ನಾವಿಲ್ಲಿ ನೋಡಬಹುದು. ಇಲ್ಲಿ ಅವನ ನಿವಾಸವಾದ ತಿರುಮಲೆಗಿಂತ ಅವನೇ ಅವರ ಪಾಲಿನ ಅಧಿದೈವ. ಆಳ್ವಾರುಗಳು ತಿರುವೇಂಗಡದಿಂದ ತಿರುವೇಂಗಡದೊಡೆಯನನ್ನು ಗುರುತಿಸಿದರು; ಆದರೆ ಆಚಾರ್ಯರು ತಿರುಮಲೆಯೊಡೆಯ ಶ್ರೀನಿವಾಸನಿಂದ ತಿರುಮಲೆಗೆ ಪ್ರಾಶಸ್ತ್ಯ ನೀಡಿರುವುದು ಇಲ್ಲಿ ಗಮನಾರ್ಹವಾದ ಅಂಶವೆನ್ನಲೇಬೇಕು. ಅವರು ಕರೆದಿರುವುದು ಶ್ರೀನಿವಾಸನೆಂದೇ!

ಕೆಲವು ಆಚಾರ್ಯರು ತನಿ ಶ್ಲೋಕದಿಂದ ಶ್ರೀನಿವಾಸನನ್ನು ಕೀರ್ತಿಸಿದರು. ಕೆಲವರು ಒಂದು ಇಡೀ ಪ್ರಬಂಧವನ್ನೇ ಶ್ರೀನಿವಾಸನಿಗೆ ಅರ್ಪಿಸಿದರು. ಅವುಗಳನ್ನು ಪರಿಶೀಲಿಸುವುದೇ ಈ ಲೇಖನದ ಉದ್ದೇಶ.

ಮೇಲೆ ತಿಳಿಸಿದಂತೆ ಆಚಾರ್ಯಪರಂಪರೆಗೆ ಶ್ರೀಕಾರಸ್ವರೂಪರೆಂದರೆ ಶ್ರೀಮನ್ನಾಥಮುನಿಗಳು. ಇವರ ಶಿಷ್ಯರು ಉಯ್ಯಕೊಂಡಾರ್ ಅಥವಾ ಪುಂಡರೀಕಾಕ್ಷರು ಇವರು ತಿರುಪ್ಪಾವೈ ಎಂಬ ಆಂಡಾಳ್ ಪ್ರಬಂಧಕ್ಕೆ ತನಿಯನ್ ಒಂದನ್ನು ರಚಿಸಿದ್ದಾರೆ. ಅದರಲ್ಲಿ ವೇಂಗಡದೊಡೆಯನ ಮಂಗಳಾಶಾಸನ ಇಂತು ಬರುತ್ತದೆ.

ಶೂಡಿಕ್ಕೊಡುತ್ತ ಶುಡರ್  
ಕೊಡಿಯೇ ತೊಲ್‌ಪಾವೈ  
ಪಾಡಿಯರುಳವಲ್ಲ  
ಪಲ್ವಳೆಯಾಯ್ -- ನಾಡಿನೀ  
ವೇಂಗಡ ವಕ್ಕೆನ್ನೈ  
ವಿಧಿಯೆನ್ನವಿಮ್ಮಾಟ್ರಮ್  
ನಾಂಗಡವಾ ವಣ್ಣಮೇನಲ್ ಹು

ತಾನು ಧರಿಸಿದ ಹೂಮಾಲೆಯನ್ನು ದೇವರಿಗೆ ಸಮರ್ಪಿಸಿ ಧನ್ಯಳಾದ ಯುವತಿ ಆಂಡಾಳ್! ಅನಾದಿಯಾದ ತಿರುಪ್ಪಾವೈ ಗ್ರಂಥವನ್ನು ಕೃಪೆತೋರಲೆಂದೇ ಅವತರಿಸಿ ಬಂದ ಸ್ವರ್ಣವಲಯ ವಿಭೂಷಿತೆಯೆ! ನೀನೊಮ್ಮೆ ಮನ್ಮಥನಿಗೆ ಬೇಡಿಕೊಂಡೆಯಲ್ಲವೆ 'ನನ್ನನ್ನು ತಿರುವೇಂಗಡ ದೊಡೆಯನಿಗೆ ಕೈಹಿಡಿದು ವಿವಾಹವಾಗುವಂತೆ ಮಾಡಿ' ಎಂಬುದಾಗಿ, ಆ ಪ್ರಾರ್ಥನೆಯನ್ನು ನಮ್ಮ ಪರವಾಗಿಯೂ ನೀನು ಮಾಡಲಾರೆಯ, ಅದು ನಮ್ಮ ಪ್ರಾರ್ಥನೆಯಾಗಿರುವಂತೆ ಅವನಿಗೆ ಬಿನ್ನವಿಸಿ ಅನುಗ್ರಹಿಸಲಾರೆಯ.

ಇಲ್ಲಿ ಆಂಡಾಳನ್ನು ಕವಿಯು ಪ್ರಶಂಸಿಸಿ ಅವಳ ಮೂಲಕ ವೇಂಗಡದೊಡೆಯನಿಗೂ ಪ್ರಣಾಮ ಸಲ್ಲಿಸಿ ನಮ್ಮನ್ನೂ ಆಂಡಾಳ್ ಮತ್ತು ವೇಂಗಡದೊಡೆಯನಲ್ಲಿ ಒಂದಾಗಿ ಮಾಡುವ ಜಾಣ್ಮೆ ವ್ಯಕ್ತವಾಗುತ್ತದೆ. ಜೀವರು ಪರಮಾತ್ಮನ ವಿಶ್ಲೇಷದಿಂದ ಅಲ್ಲವೆ ಈ ಪ್ರಪಂಚದಲ್ಲಿ ಇರುವುದು. ಆಂಡಾಳ್ ನಮ್ಮನ್ನು ಪ್ರತಿಬಿಂಬಿಸುತ್ತಾಳೆ ಎಂದೇ ತೆಗೆದುಕೊಳ್ಳಬಹುದು ಅಥವಾ ಪರಮಾತ್ಮನೊಂದಿಗೆ ಸೇರಿಸುವ ಪುರುಷಕಾರವನ್ನು ಕೈಕೊಳ್ಳುವ ಶ್ರೀದೇವಿಯೇ ಅವಳೆಂಬ ಪ್ರಾರ್ಥನೆಯೂ ಇಲ್ಲಿ ಸಲ್ಲುತ್ತದೆ. ಆಂಡಾಳ್ ಸಾಕ್ಷಾತ್ ಲಕ್ಷ್ಮಿಯ ಅವತಾರವೆಂದೇ ಪರಿಭಾವಿಸಲ್ಪಟ್ಟಿದ್ದಾಳೆ. ಈ ಚಮತ್ಕಾರವಾದ ತನಿಯನ್ನಲ್ಲಿ ಆಂಡಾಳ್, ಲಕ್ಷ್ಮಿ ತಿರುವೇಂಗಡದೊಡೆಯನ ಮಂಗಳಾಶಾಸನಗಳು ಸೊಗಸಾಗಿ ಮೂಡಿಬಂದು ಕವಿ ಕಲ್ಪನೆ ಉದಾತ್ತವಾಗಿ ವ್ಯಕ್ತಗೊಂಡಿವೆ.

ಮುಂದೆ ಆಚಾರ್ಯ ರಾಮಾನುಜರ ಮೂರು ತನಿ ಶ್ಲೋಕದಿಂದ ಶ್ರೀನಿವಾಸನ ಪ್ರಶಂಸೆಯನ್ನು ಅವಲೋಕಿಸಬಹುದಾಗಿದೆ. ರಾಮಾನುಜರಿಗೆ ಶ್ರೀನಿವಾಸನು ಅತ್ಯಂತ ಭಾವೋತ್ಕರ್ಷಕಾರಿ ದೈವ. ಅವನ ಗಿರಿಯನ್ನು ಶ್ರೀನಿವಾಸನ ಅನವರತ ಕೈಂಕರ್ಯತತ್ಪರನಿರತನಾದ ಆದಿಶೇಷವೆಂಬುದಾಗಿ ದರ್ಶಿಸಿ ತಿರುಮಲೆಯನ್ನು ಹತ್ತಲೇ ನಿರಾಕರಿಸಿದ ದಿವ್ಯಪುರುಷರು. ಈ ತಿರುಮಲೆಯಲ್ಲೇ ಅವರು ಶ್ರೀವೈಷ್ಣವ ತತ್ವರಹಸ್ಯಗಳನ್ನು ಒಳಗೊಂಡ ರಾಮಾಯಣವನ್ನು ತಿರುಮಲೆ ನಂಬಿಗಳಿಂದ ಕಾಲಕ್ಷೇಪಮಾಡಿದ್ದು. ಶ್ರೀನಿವಾಸನಿಗೆ ಶಂಖಚಕ್ರ ಧಾರಣ ಮಾಡಿಸಿದ ಕೀರ್ತಿ ಇವರದ್ದೇ. ಅವನ ವಕ್ಷಸ್ಥಳ ನಿತ್ಯವಾಸಮಾಡುವ ಲಕ್ಷ್ಮಿಯನ್ನು ಆಚಾರ್ಯರೇ ಸಮರ್ಪಿಸಿದ್ದು ಎನ್ನುತ್ತಾರೆ. ರಾಮಾನುಜರ ನವಗ್ರಂಥಗಳಲ್ಲಿ ಒಂದಾದ ವೇದಾರ್ಥ ಸಂಗ್ರಹವು ತಿರುಮಲೆಯಲ್ಲಿ ರಚಿಸಲ್ಪಟ್ಟಿತೆಂಬುದಾಗಿ ಹೇಳುತ್ತಾರೆ.

ಶ್ರೀನಿವಾಸನಿಗೆ ಪುಷ್ಪಕೈಂಕರ್ಯವೆಸಗುವುದಕ್ಕೆ ಯಾರೂ ಇಲ್ಲವಲ್ಲ ಎಂದು ಖಿನ್ನರಾಗಿ ತಮ್ಮ ಅತ್ಯಾಪ್ತ ಶಿಷ್ಯರನ್ನು ಈ ಕಾರ್ಯಕ್ಕೆ ನಿಯೋಜಿಸಿ ಕೃತಾರ್ಥರಾದ ಮಹಾನುಭಾವರು. ಅವರು ತಮ್ಮ

# ಆಚಾರ್ಯರು ಕಂಡ ಶ್ರೀನಿವಾಸ

ಶ್ರೀ ವೈಷ್ಣವ ಸಿದ್ಧಾಂತದಲ್ಲಿ ಆಳ್ವಾರುಗಳು ಮತ್ತು ಆಚಾರ್ಯರುಗಳೆಂದು ಎರಡು ವರ್ಗಗಳಿವೆ. ಈ ಸಿದ್ಧಾಂತಕ್ಕೆ ಮೂಲದ್ರವ್ಯ ಒದಗಿಸಿದವರು ಆಳ್ವಾರುಗಳಾದರೆ, ಆ ದ್ರವ್ಯ ಸಹಾಯದಿಂದ ಈ ಸಿದ್ಧಾಂತ ಪೋಷಣೆ ನಡೆಸಿದ ಮಹಾನ್‌ಗಳು ಆಚಾರ್ಯರು, ಎಂದರೆ ವೇದೋಪನಿಷತ್ ಪುರಾಣಗಳಿಂದಲೂ ಆಳ್ವಾರ್‌ಗಳ ದಿವ್ಯಪ್ರಬಂಧಗಳಿಂದಲೂ ಪ್ರೇರೇಪಣೆ ಹೊಂದಿದ ಈ ಆಚಾರ್ಯರುಗಳು, ಶ್ರೀವೈಷ್ಣವಸಿದ್ಧಾಂತವನ್ನು ಸುಭದ್ರ ಬುನಾದಿಯ ಮೇಲೆ ನಿರ್ಮಿಸಿ ಅಪ್ರತಿಮ ಗೌರವಭಾಜನರಾದರು. ಅವರೂ ದೈವ ಪಟ್ಟವನ್ನು ಹೊಂದಿದರು. ಆಳ್ವಾರುಗಳ ಕಾಲ ಕ್ರಿ.ಶ. ೯ಕ್ಕೆ ಮುಗಿದಿದ್ದರೆ ಆಚಾರ್ಯರ ಕಾಲ ೧೦ ರಿಂದ ಪ್ರಾರಂಭಗೊಂಡು ೧೬ ನೇ ಶತಮಾನದವರೆಗೂ ಮುಂದುವರೆಯಿತು. ಈ ಪರಂಪರೆಗೆ ಮೊದಲನೆಯವರು ನಾಥಮುನಿಗಳು, ಕಡೆಯವರು ಮಣವಾಳಮಹಾಮುನಿಗಳು. ನಂತರ ಯಾವ ಆಚಾರ್ಯರೂ ಅವತರಿಸಲೇ ಇಲ್ಲವೇ ಎಂದು ಕೇಳಿದರೆ ಅದು ಅವಿವೇಕವಾದೀತು. ಆ ನಂತರ ಬಂದ ಆಚಾರ್ಯರು ಈ ಹಿಂದಿನ ಗುರುಗಳ ಅಪ್ರತಿಮ ಕಾರ್ಯಚತುರತೆಗೆ ಗೌರವ ತೋರಿಸಲೆಂದೇ ಆಚಾರ್ಯ ಮಣವಾಳ ಮಹಾಮುನಿಗಳವರೆಗೇ ಆಚಾರ್ಯ ಪರಂಪರೆಯೆಂದು ತೀರ್ಮಾನಿಸಿಬಿಟ್ಟಿದ್ದಾರೆ ಅಷ್ಟೇ.

ಆಳ್ವಾರುಗಳು ತಮ್ಮ ದಿವ್ಯ ಪ್ರಬಂಧಗಳಲ್ಲಿ ತಿರುಮಲೆಗೂ ಅದರ ಒಡೆಯನಿಗೂ ಪ್ರಧಾನಸ್ಥಾನ ನೀಡಿ ತಮ್ಮ ಪಾಶುರಗಳೆಂಬ ನುತಿಮಾತುಗಳಿಂದ ಅವನನ್ನು ಅಲಂಕರಿಸಿ ಆನಂದಪಟ್ಟು ಧನ್ಯರಾಗಿದ್ದಾರೆ. ಅವರ ಪಾಶುರಗಳೆಲ್ಲ ತಮಿಳಿನವು, ನಂತರದ ಆಚಾರ್ಯರುಗಳೂ ಕೂಡ ತಿರುಪತಿಯೊಡೆಯ ಶ್ರೀನಿವಾಸನನ್ನು ತಮ್ಮ ಸ್ತೋತ್ರ, ಪ್ರಬಂಧಗಳ ಮೂಲಕ ಸಂಕೀರ್ತಿಸಿ ದಣಿದಿದ್ದಾರೆ. ಆದರೆ ಅವುಗಳ ಪ್ರಮಾಣ ಆಳ್ವಾರುಗಳ ಸಮರ್ಪಿಸಿರುವ ಪಾಶುರಗಳಷ್ಟು ಆಗುವುದಿಲ್ಲವೆನ್ನಬಹುದು, ಆಚಾರ್ಯರುಗಳು ಬಹುತೇಕ ಈ ಶ್ಲೋಕಗಳನ್ನು ಸಂಸ್ಕೃತದಲ್ಲೇ ನಿರ್ಮಿಸಿದ್ದಾರೆ. ಆಳ್ವಾರುಗಳ ಪಾಶುರಗಳಲ್ಲಿ ನಾವು ಕಾಣುವ ಐತಿಹಾಸಿಕ, ಸಾಂಸ್ಕೃತಿಕ, ಪೌರಾಣಿಕ ವಿವರಣೆಗಳನ್ನು ಇಲ್ಲಿ ನಾವು ಕಾಣಲಾರೆವು. ಕೇವಲ ಶ್ರೀನಿವಾಸನಲ್ಲಿ ದೈವಭಕ್ತಿಯೊಂದನ್ನೇ ನಾವಿಲ್ಲಿ ನೋಡಬಹುದು. ಇಲ್ಲಿ ಅವನ ನಿವಾಸವಾದ ತಿರುಮಲೆಗಿಂತ ಅವನೇ ಅವರ ಪಾಲಿನ ಅದಿದೈವ. ಆಳ್ವಾರುಗಳು ತಿರುವೇಂಗಡದಿಂದ ತಿರುವೇಂಗಡದೊಡೆಯನನ್ನು ಗುರುತಿಸಿದರು; ಆದರೆ ಆಚಾರ್ಯರು ತಿರುಮಲೆಯೊಡೆಯ ಶ್ರೀನಿವಾಸನಿಂದ ತಿರುಮಲೆಗೆ ಪ್ರಾಶಸ್ತ್ಯ ನೀಡಿರುವುದು ಇಲ್ಲಿ ಗಮನಾರ್ಹವಾದ ಅಂಶವೆನ್ನಲೇಬೇಕು. ಅವರು ಕರೆದಿರುವುದು ಶ್ರೀನಿವಾಸನೆಂದೇ!

ಕೆಲವು ಆಚಾರ್ಯರು ತನಿ ಶ್ಲೋಕದಿಂದ ಶ್ರೀನಿವಾಸನನ್ನು ಕೀರ್ತಿಸಿದರು. ಕೆಲವರು ಒಂದು ಇಡೀ ಪ್ರಬಂಧವನ್ನೇ ಶ್ರೀನಿವಾಸನಿಗೆ ಅರ್ಪಿಸಿದರು. ಅವುಗಳನ್ನು ಪರಿಶೀಲಿಸುವುದೇ ಈ ಲೇಖನದ ಉದ್ದೇಶ.

ಮೇಲೆ ತಿಳಿಸಿದಂತೆ ಆಚಾರ್ಯಪರಂಪರೆಗೆ ಶ್ರೀಕಾರಸ್ವರೂಪರೆಂದರೆ ಶ್ರೀಮನ್ನಾಥಮುನಿಗಳು. ಇವರ ಶಿಷ್ಯರು ಉಯ್ಯಕೊಂಡಾರ್ ಅಥವಾ ಪುಂಡರೀಕಾಕ್ಷರು ಇವರು ತಿರುಪ್ಪಾವೈ ಎಂಬ ಆಂಡಾಳ್ ಪ್ರಬಂಧಕ್ಕೆ ತನಿಯನ್ ಒಂದನ್ನು ರಚಿಸಿದ್ದಾರೆ. ಅದರಲ್ಲಿ ವೇಂಗಡದೊಡೆಯನ ಮಂಗಳಾಶಾಸನ ಇಂತು ಬರುತ್ತದೆ.

ಶೂಡಿಕ್ಕೊಡುತ್ತ ಶುಡರ್  
ಕೊಡಿಯೇ ತೊಲ್‌ಪಾವೈ  
ಪಾಡಿಯರುಳವಲ್ಲ  
ಪಲ್ವಳೆಯಾಯ್ -- ನಾಡಿನೀ  
ವೇಂಗಡ ವಕ್ಕೆನ್ನೈ  
ವಿಧಿಯೆನ್ನವಿಮ್ಮಾಟ್ರಮ್  
ನಾಂಗಡವಾ ವಣ್ಣಮೇನಲ್ ಹು

ತಾನು ಧರಿಸಿದ ಹೂಮಾಲೆಯನ್ನು ದೇವರಿಗೆ ಸಮರ್ಪಿಸಿ ಧನ್ಯಳಾದ ಯುವತಿ ಆಂಡಾಳ್ ! ಅನಾದಿಯಾದ ತಿರುಪ್ಪಾವೈ ಗ್ರಂಥವನ್ನು ಕೃಪೆತೋರಲೆಂದೇ ಅವತರಿಸಿ ಬಂದ ಸ್ವರ್ಣವಲಯ ವಿಭೂಷಿತೆಯೆ! ನೀನೊಮ್ಮೆ ಮನ್ಮಥನಿಗೆ ಬೇಡಿಕೊಂಡೆಯಲ್ಲವೆ 'ನನ್ನನ್ನು ತಿರುವೇಂಗಡ ದೊಡೆಯನಿಗೆ ಕೈಹಿಡಿದು ವಿವಾಹವಾಗುವಂತೆ ಮಾಡಿ' ಎಂಬುದಾಗಿ, ಆ ಪ್ರಾರ್ಥನೆಯನ್ನು ನಮ್ಮ ಪರವಾಗಿಯೂ ನೀನು ಮಾಡಲಾರೆಯ, ಅದು ನಮ್ಮ ಪ್ರಾರ್ಥನೆಯಾಗಿರುವಂತೆ ಅವನಿಗೆ ಬಿನ್ನವಿಸಿ ಅನುಗ್ರಹಿಸಲಾರೆಯ.

ಇಲ್ಲಿ ಆಂಡಾಳನ್ನು ಕವಿಯು ಪ್ರಶಂಸಿಸಿ ಅವಳ ಮೂಲಕ ವೇಂಗಡದೊಡೆಯನಿಗೂ ಪ್ರಣಾಮ ಸಲ್ಲಿಸಿ ನಮ್ಮನ್ನೂ ಆಂಡಾಳ್ ಮತ್ತು ವೇಂಗಡದೊಡೆಯನಲ್ಲಿ ಒಂದಾಗಿ ಮಾಡುವ ಜಾಣ್ಮೆ ವ್ಯಕ್ತವಾಗುತ್ತದೆ. ಜೀವರು ಪರಮಾತ್ಮನ ವಿಶ್ಲೇಷದಿಂದ ಅಲ್ಲವೆ ಈ ಪ್ರಪಂಚದಲ್ಲಿ ಇರುವುದು. ಆಂಡಾಳ್ ನಮ್ಮನ್ನು ಪ್ರತಿಬಿಂಬಿಸುತ್ತಾಳೆ ಎಂದೇ ತೆಗೆದುಕೊಳ್ಳಬಹುದು ಅಥವಾ ಪರಮಾತ್ಮನೊಂದಿಗೆ ಸೇರಿಸುವ ಪುರುಷಕಾರವನ್ನು ಕೈಕೊಳ್ಳುವ ಶ್ರೀದೇವಿಯೇ ಅವಳೆಂಬ ಪ್ರಾರ್ಥನೆಯೂ ಇಲ್ಲಿ ಸಲ್ಲುತ್ತದೆ. ಆಂಡಾಳ್ ಸಾಕ್ಷಾತ್ ಲಕ್ಷ್ಮಿಯ ಅವತಾರವೆಂದೇ ಪರಿಭಾವಿಸಲ್ಪಟ್ಟಿದ್ದಾಳೆ. ಈ ಚಮತ್ಕಾರವಾದ ತನಿಯನ್‌ನಲ್ಲಿ ಆಂಡಾಳ್, ಲಕ್ಷ್ಮಿ ತಿರುವೇಂಗಡದೊಡೆಯನ ಮಂಗಳಾಶಾಸನಗಳು ಸೊಗಸಾಗಿ ಮೂಡಿಬಂದು ಕವಿ ಕಲ್ಪನೆ ಉದಾತ್ತವಾಗಿ ವ್ಯಕ್ತಗೊಂಡಿವೆ.

ಮುಂದೆ ಆಚಾರ್ಯ ರಾಮಾನುಜರ ಮೂರು ತನಿ ಶ್ಲೋಕದಿಂದ ಶ್ರೀನಿವಾಸನ ಪ್ರಶಂಸೆಯನ್ನು ಅವಲೋಕಿಸಬಹುದಾಗಿದೆ. ರಾಮಾನುಜರಿಗೆ ಶ್ರೀನಿವಾಸನು ಅತ್ಯಂತ ಭಾವೋತ್ಕರ್ಷಕಾರಿ ದೈವ. ಅವನ ಗಿರಿಯನ್ನು ಶ್ರೀನಿವಾಸನ ಅನವರತ ಕೈಂಕರ್ಯತತ್ಪರನಿರತನಾದ ಆದಿಶೇಷವೆಂಬುದಾಗಿ ದರ್ಶಿಸಿ ತಿರುಮಲೆಯನ್ನು ಹತ್ತಲೇ ನಿರಾಕರಿಸಿದ ದಿವ್ಯಪುರುಷರು. ಈ ತಿರುಮಲೆಯಲ್ಲೇ ಅವರು ಶ್ರೀವೈಷ್ಣವ ತತ್ತ್ವ ರಹಸ್ಯಗಳನ್ನು ಒಳಗೊಂಡ ರಾಮಾಯಣವನ್ನು ತಿರುಮಲೆ ನಂಬಿಗಳಿಂದ ಕಾಲಕ್ಷೇಪಮಾಡಿದ್ದು. ಶ್ರೀನಿವಾಸನಿಗೆ ಶಂಖಚಕ್ರ ಧಾರಣ ಮಾಡಿಸಿದ ಕೀರ್ತಿ ಇವರದ್ದೇ. ಅವನ ವಕ್ಷಸ್ಥಳ ನಿತ್ಯವಾಸಮಾಡುವ ಲಕ್ಷ್ಮಿಯನ್ನು ಆಚಾರ್ಯರೇ ಸಮರ್ಪಿಸಿದ್ದು ಎನ್ನುತ್ತಾರೆ. ರಾಮಾನುಜರ ನವಗ್ರಂಥಗಳಲ್ಲಿ ಒಂದಾದ ವೇದಾರ್ಥ ಸಂಗ್ರಹವು ತಿರುಮಲೆಯಲ್ಲಿ ರಚಿಸಲ್ಪಟ್ಟಿತೆಂಬುದಾಗಿ ಹೇಳುತ್ತಾರೆ.

ಶ್ರೀನಿವಾಸನಿಗೆ ಪುಷ್ಪಕೈಂಕರ್ಯವೆಸಗುವುದಕ್ಕೆ ಯಾರೂ ಇಲ್ಲವಲ್ಲ ಎಂದು ಖಿನ್ನರಾಗಿ ತಮ್ಮ ಅತ್ಯಾಪ್ತ ಶಿಷ್ಯರನ್ನು ಈ ಕಾರ್ಯಕ್ಕೆ ನಿಯೋಜಿಸಿ ಕೃತಾರ್ಥರಾದ ಮಹಾನುಭಾವರು. ಅವರು ತಮ್ಮ

ಚಾರ್ಯ ರಾಮಾನುಜರ ಅತ್ಯಂತ ಆಪ್ತ ಶಿಷ್ಯ ರಾದ ಕೂರತ್ತಾಳ್ವಾನ್ ಅವರು ತಮ್ಮ ಸುಂದರಬಾಹುಸ್ತವದಲ್ಲಿ ವನಗಿರಿಯೆಂದು ಪ್ರಸಿದ್ಧಿ ಹೊಂದಿದ ತಿರುಮಾಲಿರುಂಶೋಲೈ ಮಲೆಯ ಅಧಿದೈವ ಸುಂದರಬಾಹುಸ್ವಾಮಿಯಲ್ಲಿ ತಿರುಮಲೆಯ ಶ್ರೀನಿವಾಸನ ಕೃಪಾಕಟಾಕ್ಷವನ್ನು ವೀಕ್ಷಿಸಿದಂತೆ ಈ ಕೆಳಗಿನ ಶ್ಲೋಕದಲ್ಲಿ ವಿವರಿಸಿದ್ದಾರೆ.

ತ್ವಂ ಹಿ ಸುಂದರ ವನಾದ್ರಿನಾಥ ಹೇ
ವೇಂಕಟಾ ಹ್ವಯನಗೇಂದ್ರ ಮೂರ್ಧನಿ
ದೇವಸೇವಿತ ಪದಾಂಬುಜದ್ವಯಃ
ಸಂಶ್ರಿತೇಭ್ಯ ಇಹ ತಿಷ್ಠಸೇ ಸದಾ

ಎಲೈ ವನಾದ್ರಿನಾಥನಾದ ಸುಂದರ ಬಾಹುವೆ! ನೀನು ವೇಂಕಟಾದ್ರಿಯಮೇಲೆ ದೇವತೆಗಳಿಂದ ಸೇವಿಸಲ್ಪಟ್ಟ ಪದಾಂಬುಜವುಳ್ಳವನಾಗಿದ್ದು ಈ ಸ್ಥಳದಲ್ಲಿ ಆಶ್ರಿತರ ಅಭಿಪ್ರಾರ್ಥಗಳನ್ನು ನೀಡುವುದು ನನ್ನ ಉದ್ದೇಶವೆಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸುತ್ತ ನಿಂತಿರುವೆಯಲ್ಲವೆ ?

ಈ ಹಿರಿಯ ದಾರ್ಶನಿಕರಿಗೆಲ್ಲ ಎಲ್ಲ ದೈವ ಮೂರ್ತಿಗಳಲ್ಲೂ ತಮಗೆ ಆಪ್ತವಾಗಿರುವ ದೈವದ ರೂಪವೇ ಕಂಡುಬರುತ್ತದೆ. ಅಂತೆಯೇ ಕೂರೇಶರಿಗೆ ಸುಂದರಬಾಹುವಿನಲ್ಲಿ ಶ್ರೀನಿವಾಸನ ರೂಪವೂ ಅಸೀಮದಯೆಯೂ ದರ್ಶಿತವಾಗುತ್ತಿದೆ.

ರಾಮಾನುಜರ ಮತ್ತೊಬ್ಬ ಶಿಷ್ಯರಾದ ಅನಂತಾರ್ಯರು ಮೇಲುಕೋಟೆಗೆ ದಯಮಾಡಿಸಿ ತಿರುನಾರಾಯಣನ ದರ್ಶನ ಲಾಭ ಹೊಂದಿದಂದು ಏಕಾದಶಿ ಆಗಿದ್ದಿತಂತೆ. ಶ್ರೀನಿವಾಸನನ್ನೇ ಸದಾಹೃದಯದಲ್ಲಿ ಹೊಂದಿದ್ದ ಆ ಆಚಾರ್ಯರಿಗೆ ತಿರುನಾರಾಯಣನ ರೂಪದಲ್ಲಿ ಶ್ರೀನಿವಾಸನೇ ಮೂಡಿಬಂದನಂತೆ! ಅದಕ್ಕೇ ಇಂದಿಗೂ ಏಕಾದಶೀ ದಿವಸರಾತ್ರಿ ಮೇಲುಕೋಟೆಯ ಪೂಜೆ ಸಲ್ಲಿಸುವ ಪದ್ಧತಿ ನಡೆಯುತ್ತಿದೆ. ಇದನ್ನು "ಪುನಗುಕಾಪ್ಪುಸೇವೆ" ಎಂದು ಕರೆಯುತ್ತಾರೆ.

ಶ್ರೀ ವಾತ್ಸ್ಯವರದಾಚಾರ್ಯರೆಂಬ ಆಚಾರ್ಯರು ಪರತ್ವಾದಿ ಪಂಚಕಂ ಎನ್ನುವ ಮುಕ್ತಕ ಶ್ಲೋಕಗಳಲ್ಲಿ ಅರ್ಚಾ ವಿಗ್ರಹಗಳ ಹಿರಿಮೆಯನ್ನು ಪಾಂಚರಾತ್ರಾಗಮದ ಅನುಸಾರವಾಗಿ ಪ್ರಶಂಸಿಸುತ್ತಾ ಆ ರೂಪದಿಂದ ಜೀವರನ್ನುದ್ಧಾರವೆಸಗಲು ನಾಲ್ಕು ದಿವ್ಯಕ್ಷೇತ್ರಗಳಲ್ಲಿ ರಾರಾಜಿಸುತ್ತಿರುವ ದಿವ್ಯಮಂಗಳ ವಿಗ್ರಹರೂಪಿಯಾದ ಪರಮಾತ್ಮನನ್ನು ಈ ರೀತಿ ವರ್ಣಿಸುತ್ತಾರೆ.

ಶ್ರೀರಂಗಸ್ಥಳ ವೇಂಕಟಾದ್ರಿ
ಕರಿಗಿರ್ಯಾದೌ ಶತೇ ಷ್ಟೋತ್ತರೇ
ಸ್ಥಾನೇ ಗ್ರಾಮನಿಕೇತನೇಷು ಚ
ಸದಾ ಸಾನ್ನಿಧ್ಯ ಮಾಸೇದುಷೇ
ಅರ್ಚಾರೂಪಿಣಮರ್ಚಕಾಭಿ
ಮತಿತಃ ಸ್ವೀಕುರ್ವತೇ ವಿಗ್ರಹಂ
ಪೂಜಾಂಚಾಖಿಲ ವಾಂಛಿತಾನ್
ವಿತರತೇ ಶ್ರೀ ಶಾಯ ತಸ್ಮೈ ನಮಃ

ನಾವೀಗ ಬರುತ್ತಿರುವುದು ಶ್ರೀವೈಷ್ಣವ ಸಾಹಿತ್ಯದಲ್ಲಿ ಅಪಾರ ವೈದುಷ್ಯದಿಂದ ವಿಜೃಂಭಿಸಿದ ಆಚಾರ್ಯ ವೇದಾಂತ ದೇಶಿಕರ ಕಾಲಕ್ಕೆ. ಅವರು ಸಕಲರಿಂದಲೂ ಆದರಣೀಯರಾಗಿ ಸಂಸ್ಕೃತ ಸಾಹಿತ್ಯ ನಿರ್ಮಾಣದಲ್ಲಿ ಅದ್ವಿತೀಯರಾಗಿ ಮೆರೆದವರು. ಇವರ ಸ್ತೋತ್ರಗಳು ಒಂದೇ ಎರಡೇ. ಕವಿತಾರ್ಕಿಕರೇ ಸರಿಯೆಂದು ಪ್ರಶಂಸೆಗೊಳಪಟ್ಟ ಇವರು ಸಂಸ್ಕೃತ, ತಮಿಳು ಎರಡು ಭಾಷೆಗಳಲ್ಲೂ ಕೃತಿರಚನೆ ನಡೆಸಿದರು. ಶ್ರೀ ವೈಷ್ಣವ ಸಾಹಿತ್ಯ ಕೂರತ್ತಾಳ್ವಾನ್ ಪರಾಶರಭಟ್ಟರ್ ಮತ್ತು ವೇದಾಂತ ದೇಶಿಕರುಗಳ ವಾಗ್ವೈಖರಿಗಳಿಂದ ಶ್ರೀಮಂತಗೊಂಡು ನಿತ್ಯ ನೂತನವಾಗಿ ಮೆರೆಯುತ್ತಿದೆ.

ತಿರುಮಲೆಯ ದೇವನ ಅನುಗ್ರಹದಿಂದಲೇ ಅವತರಿಸಿದ ಈ ಮಹನೀಯರಿಗೆ ತಿರುಪತಿಯ ಶ್ರೀನಿವಾಸನ ಮೇಲೆ ಅಷ್ಟೇ ಅರುಮೆ. ಅವರ ಹೆಸರೂ ಆತನದೇ! ಇವರ ಸಾಹಿತ್ಯದಲ್ಲಿ ವೆಂಕಟೇಶನ ಮಂಗಳಾಶಾಸನ ಸ್ತೋತ್ರಗಳು ಅಲ್ಲಲ್ಲಿ ಮಿಂಚುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಅಭ್ಯಸಿಸೋಣ.

ಅಧಿಕಾರ ಸಂಗ್ರಹದಲ್ಲಿ ತಿರುವೇಂಗಡ ವಿಷಯವಾದ ಒಂದು ಪಾಶುರವುಂಟು. ಅವರ ಅದ್ವಿತೀಯ ತತ್ತ್ವಗ್ರಂಥವಾದ ರಹಸ್ಯತ್ರಯಸಾರದಲ್ಲಿನ ಒಂದು ಅಧ್ಯಾಯವೇ ಅಧಿಕಾರ ಸಂಗ್ರಹ.

ಕಣ್ಣನಡಿಯಿಣೈಯೆ ಮಕ್ಕು
ಕಾಟ್ಟುಂ ವೆರ್ಪು
ಕ್ಕಡುವಿನೈಯ ರಿರುವಿನೈಯುಂ
ಕಡಿಯುಂ ವೆರ್ಪು
ತಿಣ್ಣ ಮಿದು ವೀಡೆನ್ನ
ತ್ತಿಗಳುಂ ವೆರ್ಪು
ತೆಳಿಂದ ಪೆರುಂ ತೀರ್ ತಂಗಳ್
ಶೆರಿಂದ ವೆರ್ಪು
ಪುಣ್ಣಿಯತ್ತಿನ್ ಪುಗಲಿದೆನು
ಪುಗಳುಂ ವೆರ್ಪು
ಪೊನ್ನುಲಹೀರ್ ಪೋಹಮೆಲ್ಲಾಂ
ಪುಣರ್ ಕುಂ ವೆರ್ಪು
ವೇಂಗಡವರ್ಪೆನ
ವಿಳಂಗುಂ ವೇದ ವೆರ್ಪೇ

ಶ್ರೀಕೃಷ್ಣನ ಪದಪದ್ಮಗಳನ್ನು ನಮಗೆ ಸಾಕ್ಷಾತ್ಕರಿಸಿಕೊಡುವಂತಹ ಮಲೆ; ಮಹತ್ತಾದ ಪಾಪಗಳನ್ನು ಮಾಡಿರುವವರ ಪೂರ್ವ ಮತ್ತು ಉತ್ತರಾಘಗಳನ್ನು ನಿರ್ಮೂಲ ಮಾಡತಕ್ಕದಿಟ್ಟ; ಇದೇ ಪರಮಪದವೆಂದು ಮೆರೆಯುವ ಉತ್ಕೃಷ್ಟವಾದ ದೆಟ್ಟ, ನಿರ್ಮಲವಾದ ಪುಣ್ಯ ಸಲಿಲಗಳಿಂದ ಕಂಗೊಳಿಸುವ ದಿವ್ಯ ದೆಟ್ಟ; ಪುಣ್ಯವಂತರಿಗೆ ಗಂತವ್ಯವೆನಿಸಲ್ಪಡುವ ಪವಿತ್ರ ಗಿರಿಯಿದು; ಸ್ವರ್ಗಭೋಗಗಳನ್ನೆಲ್ಲಾ ನೀಡುವಂತಹ ಗಿರಿ, ದಾನವರು ಮಾನವರೂ ಅಪೇಕ್ಷಿಸುವ ಗಿರಿ ಇದು. ವೇದಸ್ವರೂಪವೇ ಇದು ಎಂದಾಗಿ ಗಿರಿಯ ಮಹಿಮೆ ತಿಳಿಯಿತಲ್ಲವೆ?

ನಮ್ಮಾಳ್ವಾರ್ ಅವರು ತಿರುವಾಯ್ಮೊಳಿಯಲ್ಲಿ ಹಾಡಿರುವ 'ಒಳುಎಲ್‌ಕಾಲ ಮೆಲ್ಲಾಂ' ಎನ್ನುವ ಹತ್ತು ಪಾಶುರಗಳ ಸಂಗ್ರಹ ಇಲ್ಲಿ ಪಡಿನೆಳಲಾಗಿ ಮೂಡಿಬಂದಿದೆ ಎನ್ನಬಹುದು.

ವೇದಾಂತದೇಶಿಕರ ಸಂಕಲ್ಪ ಸೂರ್ಯೋದಯವೆನ್ನುವ ನಾಟಕಪ್ರಬಂಧದಲ್ಲಿ ಒಂದೆಡೆ ತಿರುಮಲೆಯನ್ನು ಮನದಣಿಯೆ ಹೊಗಳಿದ್ದಾರೆ.

ತರ್ಕ :-- ಇತಶ್ಚದೀಯತಾಂ ದೃಷ್ಟಿರ್ದೇವನ್! ಅಯಂ! ಖಲ್ವಧಿಗತ ಪರಾವರ ತತ್ತ್ವಯಾದಾರ್ಢ್ಯೈಃ ಮಹಾತ್ಮಭಿಃ ಅಧ್ಯಕ್ಷಿತ ಮಿವ ಪರಮಪದ ಮನೇಕ ದೇಶ ದರ್ಶನ ಪ್ರಯಾಸ ಪರಿಶ್ರಾಂತಯೋರವಯೋ ರ್ವಿಶ್ರಾಂತಿ ಭೂಮಿರಿವ ಭಗವತಾ ಸ್ವಯಮೇವ ನಿರ್ಮಿತೋ ದೂರಾದವಲೋಕ್ಯಮಾನವಿಕಟತರಹ್ಯಾಟಕಕೂಟ ವಿರಾಜಮಾನ ದಶದಿಶಾವಕಾಶಃ ಕಲಿಬಲಪ್ರಸಾರಿತ ಸಕಲ ಸಂಕಟ ಪ್ರಶಮನೋ ವೇಂಕಟಾದ್ರಿ ರಾಲಕ್ಷ್ಯತೇ

ಪಾರೋಕ್ಷ್ಯಂಗ ಮಿಹಾದಿ ಪೂರುಷ
ಪದಪ್ರಸ್ಯಂದಿ ಪಾಥಸ್ವಿನೀ
ಪಾಥಃ ಪಾತ ಪರಂ ಪರಾದ್ಭುತ
ಮಹಾರಣ್ಯೇ ಶರಣ್ಯೇ ಸತಾಮ್
ಪಾರಾವರ್ಯ ವಿವೇಕ ಪಂಕ್ತಿ
ಮಧಿಯಸತ್ವಾಪ್ಷ ತತ್ತ್ವಂ ಪರಮ್
ಪಶ್ಯಂತಃ ಪ್ರಚರಂತಿ ದನ್ತ ಸುಖಿನಃ
ಸರ್ವೇಪಿ ನಿರ್ವೈರತಃ

ತರ್ಕ :-- ಮಹಾರಾಜ! ಇತ್ತಕಡೆ ನೋಡಿ! ಈಶ, ಈಶಿತವ್ಯ ಇವರುಗಳ ರೂಪ, ಸ್ವರೂಪ, ಸ್ವಭಾವಾದಿಗಳನ್ನು ತಿಳಿದಿರುವ ಮಹಾತ್ಮರು ಪರಮ ಪದವೆಂದು ನಿಶ್ಚಯಿಸಿರುವ ವೆಂಕಟಾಚಲವು ಕಾಣುತ್ತಿರುವುದು. ಅನೇಕ ದೇಶಗಳನ್ನು ತಿರುಗಿ ಬಳಲಿರುವ ನಮಗಾಗಿ ಪರಮಾತ್ಮನು ಸ್ವಯಂ ನಿರ್ಮಾಣ ಮಾಡಿದ ವಿಶ್ರಾಂತಿ ಭೂಮಿಯಂತಿರುವುದು. ವಿಸ್ತಾ

ರವಾದ ಗೃಹಪಂಕ್ತಿಗಳಿಂದ ಪ್ರಕಾಶಮಾನವಾಗಿದೆ. ಕಲಿ ಪ್ರಾಬಲ್ಯದಿಂದ ಉಂಟಾಗುವ ಸಂಕಟಗಳೆಲ್ಲವನ್ನೂ ಶಮನಗೊಳಿಸುತ್ತಿರುವುದು.

ಇದರ ಶಿಖರದಲ್ಲಿ ಆದಿಪುರುಷನ ಪಾದಾರವಿಂದದಿಂದ ಪ್ರವಹಿಸುವ ನದಿಯು ಮೇಲಿನಿಂದ ಬೀಳುವುದರಿಂದ ಆಶ್ಚರ್ಯಕರವಾದ ಮಹಾರಣ್ಯವುಸತ್ಪುರುಷರಿಗೆ ಶರಣ್ಯವಾಗಿರುವುದು. ಸಾರಾಸಾರ ವಿವೇಚನೆಯಲ್ಲಿ ಪರಿಪಕ್ವವಾದ ಬುದ್ಧಿಯುಳ್ಳ ಪ್ರಾಣಿಗಳು ಪರತತ್ವವಾದ ನಾರಾಯಣನನ್ನು ದರ್ಶನಮಾಡುತ್ತಾ ಸಹಜ ವೈರವನ್ನು ತೊರೆದು ಸುಖದಿಂದ ವಾಸಮಾಡುತ್ತಿರುವುವು.

ಮುಂದುವರಿಯುತ್ತಾ ತರ್ಕನೆಂಬುವನು ಹೀಗೆ ಹೇಳುತ್ತಾನೆ-- "ಇಲ್ಲಿ ಒಬ್ಬ ಮಹಾನುಭಾವನು ಅನಾದಿ ಪಾಪವಾಸನೆಗಳನ್ನು ಪರಿಹರಿಸುವ ಶ್ರೀನಿವಾಸನ ದಯೆಯನ್ನು ಸಂಬೋಧಿಸಿ ಹೀಗೆ ಹೇಳಿರುವನು ಎಂದು ಮುಂದಕ್ಕೆ ವೇದಾಂತದೇಶಿಕರ ದಯಾಶತಕದ ಎರಡು ಸ್ತೋತ್ರಗಳನ್ನು ಉದ್ಧರಿಸಿದ್ದಾರೆ.

ಇದೇ ಗ್ರಂಥದ ಪತ್ತನೇ ಅಂಗದಲ್ಲಿ ಒಂದು ಪ್ರಾರ್ಥನಾ ಪದ್ಯದಲ್ಲಿ ತಿರುಮಲೆಯ ವಿಚಾರ ಮತ್ತೆ ಬರುತ್ತದೆ.

ತ್ವಯಿ ಬಹುಮತಿ ಹೀನಃ
ಶ್ರೀನಿವಾಸಾನುಕಂಪೇ
ಜಗತಿ ಗತಿ ಮಿಹಾನ್ಯಾಂ
ದೇವಿ ಸಂಮನ್ಯತೇಯಃ
ಸಖಲು ವಿಬುಧ ಸಿಂಧೌ
ಸನ್ನಿಕರ್ಷೇ ವಹಂತ್ಯಾಂ
ಶಮಯತಿ ಮೃಗತೃಷ್ಣಾ
ವೀಚಿಕಾಭಿಃ ಪಿಪಾಸಾಮ್

ಶ್ರೀನಿವಾಸನ ಕೃಪೆಯೇ! ನಿನ್ನನ್ನು ಲಕ್ಷಿಸದೇ ಪ್ರಪಂಚದಲ್ಲಿ ಬೇರೆ ದಾರಿಯ ಮನುಷ್ಯನು ಸಮೀಪದಲ್ಲಿ ಗಂಗೆಯು ಹರಿಯುತ್ತಿದ್ದರೂ ಸಹ ಮರೀಚಿಕಾ ಜಲದಲ್ಲಿ ತನ್ನ ಬಾಯಾರಿಕೆಯನ್ನು ಪರಿಹರಿಸಿಕೊಳ್ಳುವುದಕ್ಕೆ ಯತ್ನಿಸುವ ಮೂರ್ಖನಂತಾಗುತ್ತಾನೆ.

ದಯಾಶತಕವು ಒಂದು ರಸಘಟ್ಟಿ. ಶ್ರೀನಿವಾಸನದಯೆಯನ್ನೇ ಒಂದು ದೇವಿಯನ್ನಾಗಿ ಭಾವಿಸಿ ಶ್ರೀನಿವಾಸನ ಕೃಪಾಸಂಪಾದನೆಗಾಗಿ ಆಕೆಯನ್ನು ಆಶ್ರಯಿಸಲು ಆಕೆಯ ಹಿರಿಮೆಗರಿಮೆಗಳನ್ನು ವಿವರಿಸುತ್ತಾ ೧೦೮ ಶ್ಲೋಕಗಳಲ್ಲಿ ಕೀರ್ತಿಸಿರುವ ಸ್ತೋತ್ರಕಾವ್ಯ ಮೊದಲಿನ ಸ್ತೋತ್ರವೇ ಒಂದು ಭಾವಪೂರ್ಣವಾದ ಗಾಯನವಾಗಿದೆ.

ಪ್ರಪದ್ಯೇ ತಂ ಗಿರಿಂ ಪ್ರಾಯಃ
ಶ್ರೀನಿವಾಸಾನುಕಂಪಯಾ
ಇಕ್ಷುಸಾರ ಸ್ರವಂತ್ಯಾ ಇವ
ಯನ್ಮೂರ್ತ್ಯಾ ಶರ್ಕರಾಯಿತಂ

ಕಬ್ಬಿನ ರಸದ ನದಿಯಂತೆ ಹರಿಯುತ್ತಿರುವ ಶ್ರೀನಿವಾಸನ ದಯೆಯೇ ಯಾರ ಬೆಟ್ಟದ ರೂಪದಲ್ಲಿ ಕಲ್ಲು ಸಕ್ಕರೆಯಂತೆ ಗಟ್ಟಿಯಾಗಿ ಬೆಟ್ಟವಾಗಿಬಿಟ್ಟಿದೆಯೋ ಆ ವೆಂಕಟಾಚಲವನ್ನು ನಾನು ಶರಣು ಹೋಗುತ್ತೇನೆ.

'ಮೃದುಹೃದಯೆ ದಯೇ' ಎಂಬುದಾಗಿ ಶ್ರೀನಿವಾಸನ ದಯೆಯನ್ನು ಸಂಬೋಧಿಸಿ ವರ್ಣಿಸಿರುವ ಈ ಸ್ತೋತ್ರಗಳು ದಿವ್ಯರತ್ನಗಳು. 'ಪ್ರತಿಪಂಕ್ತಿ ರಸೋದಯಂ' ಎಂಬಂತೆ ಪ್ರತಿ ಸ್ತೋತ್ರವೂ ಅತ್ಯಂತ ಧ್ವನಿಪೂರ್ಣವಾದದ್ದು. ಶ್ರೀನಿವಾಸನ ಮಹಿಮೆಯಯನ್ನೂ ಸೌಲಭ್ಯ ಸೌಶೀಲ್ಯಾದಿ ಗುಣಪ್ರವೃತ್ತಿಗಳನ್ನು ಅನ್ಯಾದೃಶವಾಗಿ ವಿವರಿಸುತ್ತವೆ. ಇದರ ಸೊಬಗನ್ನು ಅನುಸಂಧಾನಿಸಿಯೇ ಅನುಭವಿಸಬೇಕೇ ಹೊರತು ಮಾತುಗಳಿಂದ ತಿಳಿಯ ತಕ್ಕದ್ದಲ್ಲ.

ಆಚಾರ್ಯ ದೇಶಿಕರು ನಮ್ಮಾಳ್ವಾರ್ ರವರ ಮೇಲೆ ಅತ್ಯಂತ ಆದರವನ್ನಿಟ್ಟಿದ್ದರು. ಇದು ಇವರ ಪಾದುಕಾಸಹಸ್ರದಿಂದ ಸುಸ್ಪಷ್ಟ. ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಇವರಿಗೆ ಪರಮ ಆದರಣೀಯ. ಅದಕ್ಕೆಂದೇ ಅವರು ತಿರುವಾಯ್ಮೊಳಿಯ ದಶಕಕ್ಕೆ ಒಂದರಂತೆ ಆ ದಶಕದ ತಾತ್ಪರ್ಯವನ್ನೊಳಗೊಂಡ ಒಂದು ಸ್ತೋತ್ರಪ್ರಬಂಧವನ್ನು ಸೊಗಸಾದ ಸಂಸ್ಕೃತದಲ್ಲಿ ರಚಿಸಿದ್ದಾರೆ. ಇದರ ಹೆಸರು ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿ ಎಂಬುದಾಗಿದೆ. ಇದಕ್ಕೆ ಈ ಹೆಸರನ್ನು ಇಡಲು ಒಂದು ಹೃದಯ ಕಲಕುವಂತಹ ಇತಿಹಾಸವಿದೆ. ಶ್ರೀರಂಗದ ಅಧಿದೈವ ಶ್ರೀರಂಗನಾಥನು ಮುತ್ತಂಗಿ ಮತ್ತು ರತ್ನಾಂಗಿಗಳಿಂದ ವಿಭೂಷಿತನಾಗಿ ಭಕ್ತರ ಮನಸ್ಸನ್ನು ರಂಜಿಸುತ್ತಿದ್ದಾಗ ಧಾಳಿಕಾರರು ಈ ಎರಡು ದಿವ್ಯಾಭರಣಗಳನ್ನು ಕೊಳ್ಳೆಹೊಡೆದುಕೊಂಡು ಹೋದರು. ಆ ಆಭರಣಗಳು ಇಲ್ಲದ ಶ್ರೀರಂಗನಾಥನನ್ನು ದರ್ಶಿಸಿದಾಗ ವೇದಾಂತದೇಶಿಕರಿಗೆ ಆದ ದುಃಖ ಅಂತಿಂತಹುದಲ್ಲ. ಆಗಲೇ ಆ ಮೂರ್ತಿಗೆ ತತ್ವಮುಕ್ತಾಕಲಾಪ ಎನ್ನುವ ಗ್ರಂಥರತ್ನವನ್ನೂ ದ್ರವಿಡೋಪನಿಷತ್ ತಾತ್ಪರ್ಯರತ್ನಾವಳಿ ಎನ್ನುವ ಮತ್ತೊಂದು ಅನರ್ಘ್ಯ ಗ್ರಂಥವನ್ನೂ ಸಮರ್ಪಿಸಿ ರಂಗನಾಥನ ಅನುಗ್ರಹಕ್ಕೆ ಪಾತ್ರ ದರು. ಇದರಲ್ಲಿ ಒಂದು ವೈವಿಧ್ಯವೂ ಉಂಟು. ಮುಕ್ತಾಕಲಾಪ ಮುತ್ತಿನ ಆಭರಣವಾಗಿ ಆಚಾ ರಾಮಾನುಜರ ಶ್ರೀ ಭಾಷ್ಯಕ್ಕೆ ವ್ಯಾಖ್ಯಾನವಾಗಿ ಷ ದಿದೆ. ಶ್ರೀವೈಷ್ಣವಸಿದ್ಧಾಂತದ ದವಿಡ ವೇದ ಸುವ ತಿರುವಾಯ್ಮೊಳಿಯ ಸಾರವನ್ನು ವಿವರಿ ದ್ರವಿಡೋಪನಿಷತ್ ತಾತ್ಪರ್ಯರತ್ನಾವಳಿ ರತ್ ರಣವಾಗಿ ಮೆರೆಯುತ್ತದೆ. ತಿರುವಾಯ್ಮೊಳಿ ಎರಡು ದಶಕಗಳಲ್ಲಿ ತಿರುಮಲೆಯ ವೈಭ ವಿಸ್ತಾರಗೊಂಡಿದೆ. ಆ ದಶಕಗಳಿಗೆ ಈ ತಾತ್ಪ ರತ್ನಾವಳಿಯಲ್ಲಿ ಎರಡು ಶ್ಲೋಕಗಳು ಆಚಾ ದೇಶಿಕರಿಂದ ರಚಿಸಲ್ಪಟ್ಟಿದ್ದು ಅದನ್ನು ನಾವೀಗ ಲೋಕಿಸಬಹುದಾಗಿದೆ.

ತಿರುವಾಯ್ಮೊಳಿಯ ಮೂರನೇ ಶತ ಮೂರನೇ ದಶಕದ ಸಾರರೂಪಾವಾದ ಸ್ತೋ ಇಂತಿದೆ.

ಸ್ವಾನೋತ್ಕರ್ಷಾತ್ತುದೀಪ್ತಂ
ಶ್ರಮಹರವಪುಷಂ,
ಸ್ವಾಂಗಪರ್ಯಾಪ್ತ ಭೂಷಂ
ತೇಜಿಷ್ಠ ನೀಚಯೋಗಾತ್,
ಪ್ರಣಮಿತ ಭುವನಂ,
ಪಾವನಂ ಸನ್ನತಾನಾಮ್
ಪ್ರಾಪ್ಯಾರ್ಹಸ್ಥಾನಂ
ಅಂಹಃ ಪ್ರಶಮನ ವಿಷಯಂ
ಬಂಧ ವಿಚ್ಛೇದಿ ಪಾದಮ್
ಧೇಜೀ ಶೀಘ್ರಾಭಿಯಾನ
ಕ್ಷಮ ಶುಭವಸತಿಂ
ಲಂಬಿತಾರ್ಚಾಭಿ ಮುಖ್ಯಮ್

ಸರ್ವೇಶ್ವರನಾದ ವೆಂಕಟೇಶನು ತಿರುಮಲೆ ಮೇಲ ನೆಲಸಿದ್ದರಿಂದ ಉಂಟಾದ ನಿರವಧಿಕ ತೇ ಸ್ಸಿನಿಂದಲೂ, ತನ್ನನ್ನು ಸೇರಲು ಬರುವವರ ಶ್ರ ವನ್ನು ಹೋಗಲಾಡಿಸುವ ದಿವ್ಯಮಂಗಳ ರೂ ನಿಂದಲೂ, ಸದ್ಯೋವಿಕಸಿತವಾದ ಸರಸಿಜದಂತ ನೇತ್ರಯುಗ್ಮವುಳ್ಳವನೂ, ಅತಿನೀಚರಾದ ಚೇತ ರನ್ನೂ ಉದ್ಧರಿಸಿದ ತೋಜೋವಂತನೂ ಸಕ ಲೋಕ ನಮಸ್ಕೃತ ಪದಯುಗಳನೂ, ಸ್ವಾಶ್ರಿತ ಆಶ್ರಯಣ ವಿರೋಧಗಳನ್ನು ನಾಶಪಡಿಸಿ ಅವರ ಶುದ್ಧ ಚೇತನರನ್ನಾಗಿಸುವವನೂ, ಚೇತನರು ಆ ಯಿಸುವಂತಹ ಮಹನ್ನಿವಾಸವುಳ್ಳವನೂ, ತಾ ನೆಲಸಿರುವ ಕ್ಷೇತ್ರವೇ ಆಶ್ರಿತರ ಕರ್ಮ, ಪಾಪ ಳನ್ನು ನಿವಾರಿಸುವಂತಹ ಗುಣವನ್ನು ಹೊಂದಿ ವಂತೆ ಮಾಡಿರುವವನೂ, ಆಶ್ರಿತರನ್ನು ಜನ್ಮ ಜ ಮರಣಗಳಿಂದ ಪರಿಹಾರ ಮಾಡುವವನೂ, ಅ

ಶೀಘ್ರವಾಗಿ ಪ್ರಪನ್ನನು ಆಶ್ರಯಿಸಲು ಅನುಕೂಲಿಸುವಂತೆ ತಿರುಮಲೆಯ ಮೇಲೆ ವಾಸಮಾಡುತ್ತಿರುವವನೂ ಆಗಿದ್ದಾನೆ. ಇದೇ ರೀತಿ ಆರನೇ ಶತಕದ ಹತ್ತನೇ ದಶಕದಲ್ಲಿ ಶ್ರೀನಿವಾಸನ ಆಶ್ರಿತರಕ್ಷಣ ಗುಣವನ್ನು ವರ್ಣಿಸಿರುವುದನ್ನು ಈ ರೀತಿ ಸಂಕ್ಷೇಪಮಾಡುತ್ತಾರೆ.

ಆಪತ್ಸಂರಕ್ಷಣಾದತ್ಯುಪಕರಣತಯಾ
ಮೇಘ ಸಾಮ್ಯಾದಿ ಭೂಮ್ನಾ
ಸ್ವಾನಾಂ ವಿಶ್ವಾಸ ದಾನಾತ್ ಸುರಗಣ
ಭಜನಾತ್ ದಿವ್ಯದೇಶೋಪ ಸತ್ತ್ಯಾ
ಪ್ರಾಪ್ಯಾ ಪ್ರಾಪ್ಯತ್ವಯೋಗಾತ್ ಸ್ವಜನ
ವಿಜನಯೋಃ ಸತ್ಪ್ರಪತ್ತವ್ಯ ಭಾವಾತ್
ಊಚೇನಾಥಂ ಶರಣ್ಯಂ ಶ್ರುತಿಶತ
ವಿದಿತಮ್ ವೇಂಕಟೇಶಂ ಶಠಾರಿಃ

ಆಪತ್ಕಾಲದಲ್ಲಿ (ಪ್ರಳಯದಂದು) ರಕ್ಷಿಸುವುದಕ್ಕಾಗಿಯೂ, ಶತ್ರುಗಳನ್ನು ನಿರಸನ ಮಾಡಲು ಸುದರ್ಶನ ಚಕ್ರವನ್ನು ಧರಿಸಿರುವವನೂ, ನೀಲಮೇಘದಂತ ತನುಕಾಂತಿಯುಳ್ಳವನೂ, ನಿರತಿಶಯ ಕೀರ್ತಿಯುಳ್ಳವನೂ, ಸುಗ್ರೀವಾದಿ ಭಕ್ತರಿಗೆ ತನ್ನ ಮೇಲೆ ವಿಶ್ವಾಸವುಂಟುಮಾಡಿಕೊಳ್ಳತಕ್ಕವನೂ, ನಿತ್ಯಸೂರಿಗಳಿಂದ ಸತತ ಸಂಸೇವ್ಯನೂ, ಆಶ್ರಿತರಿಗೆ ಸನ್ನಿಹಿತನೂ, ಅನಾಶ್ರಿತರಿಗೆ ದೂರಸ್ಥನೂ ಸತ್ಪುರುಷರಿಗೆ ಪ್ರಪತ್ತಿಮಾರ್ಗ ಮುಖೇನ ಸೌಲಭ್ಯನೂ ಆಗಿದ್ದಾನೆ ಶ್ರೀನಿವಾಸ. ಇವನು ವೇದ ಪ್ರಸಿದ್ಧವಾದ ತಿರುಮಲೆಯ ಮೇಲೆ ನಿತ್ಯವಾಸವೆಸಗಿದ್ದಾನೆ. ಇವನಲ್ಲವೇ ಸರ್ವಲೋಕ ಶರಣ್ಯನಾಗಿದ್ದಾನೆ.

ಇದೇರೀತಿ ತಿರುವಾಯ್ಮೊಳಿಗೆ ಸಾರವಾಗಿ ಮತ್ತೊಂದು ರಚನೆ ಇದೆ. ಇದನ್ನು ರಚಿಸಿದವರು ವಾದಿಕೇಸರಿ ಅಳಹಿಯಮನವಾಳ ಜೀಯರ್ ಅವರು. ಇವರೂ ಕೂಡ ತಿರುವಾಯ್ಮೊಳಿಯ ಪ್ರತಿ ದಶಕಕ್ಕೆ ಒಂದು ಶ್ಲೋಕದಂತೆ ಸಂಸ್ಕೃತದಲ್ಲಿ ಪ್ರಬಂಧ ನಿರ್ಮಾಣಮಾಡಿದ್ದಾರೆ. ಇದಕ್ಕೆ ದ್ರವಿಡೋಪನಿಷತ್ ಸಂಗತಿ ಎಂಬುದಾಗಿ ಹೆಸರು.

ಮೇಲೆ ತಿಳಿಸಿದ ಎರಡು ದಶಕಗಳನ್ನು ಈ ಮಹನೀಯರು ಈ ಕೆಳಕಂಡಂತೆ ಸರಳವಾಗಿ ವಿವರಿಸುತ್ತಾರೆ. ಇದರಲ್ಲಿ ತಿರುಮಲೆಯೊಡನೆಗೆ ಮಂಗಳಾಶಾಸನವಿದೆಯಾಗಿ ಇಲ್ಲಿ ಪ್ರಸ್ತಾಪಮಾಡಲಾಗಿದೆ.

ತಿರುವಾಯ್ಮೊಳಿಯ ತೃತೀಯ ಶತಕದ ಸಾರರೂಪ ಸ್ತೋತ್ರ ಇಂತಿದೆ--

ಸರ್ವತ್ರ ಸರ್ವ ಸಮಯೇ ಸಕಲಾಸ್ವವಸ್ಥಾ
ಸ್ವಭ್ಯರ್ಥಯನ್ ನಿಖಿಲದಾಸ್ಯರಸನಾನ್ಸುನೀಂದ್ರಃ
ಶ್ರೀ ವೇಂಕಟಾದ್ರಿ ನಿಲಯಸ್ಯ ಪರಸ್ಯಪುಂಸೋ
ನಿಸ್ಸೀಮ ಶೀಲ ಗುಣಮಪ್ಯ ವದತ್ತೃತೀಯೇ

ಈ ಮೂರನೇ ದಶಕದಲ್ಲಿ ಶ್ರೀಶಠಾರಿ ಮುನಿವರ್ಯರು ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಸಕಲ ವಿಧ ಕೈಂಕರ್ಯಗಳನ್ನು ಶ್ರೀ ವೆಂಕಟೇಶನ ಚರಣಾರವಿಂದಯುಗಳದಲ್ಲೇ ಮಾಡಬೇಕೆಂದು ಪ್ರಾರ್ಥಿಸಿ ನಿತ್ಯಸೂರಿಗಳು ಕೂಡ ಇಲ್ಲಿಯೇ ಬಂದು ಸೇವಿಸುತ್ತಿರುವುದರಿಂದ ಎಲ್ಲರೂ ಈ ಪರ್ವತದ ಸಾನುಪ್ರದೇಶವನ್ನೇ ಭಜಿಸಿ ಕೃತಾರ್ಥರಾಗಲು ಉಪದೇಶ ನೀಡುತ್ತಾರೆ.

ಷಷ್ಠಮಶತಕದ ದಶಮದಶಕದ ತಿರುವೇಂಗಡ ಮೇಲಿನ ಮಂಗಳಾಶಾಸನ ಇಂತು ಸಾರ ರೂಪಗೊಳ್ಳುತ್ತದೆ.

ಆರ್ತೇಸ್ತಥಾ ಗತತಯಾ ಮುನಿರಬ್ಜವಾಸಾ
ಮಾಶ್ರಿತ್ಯ ಸಂಘಟನ ಕರ್ಮಣಿ ಜಾಗರೂಕಾಮ್
ಆವೇದ್ಯ ಚಾದಿ ದಶಮಂ ಸ್ವಮಕಿಂಚನತ್ವಮ್
ಶ್ರೀವೇಂಕಟೇಶ ಚರಣೌ ಶರಣಂ ಪ್ರಪೇದ್ಯೇ

ಈ ಹತ್ತನೆಯ ದಶಕದಲ್ಲಿ ಶ್ರೀ ಶಠಾರಿ ಮುನಿವರ್ಯರು ಶ್ರೀ ಭಗವಂತನಲ್ಲಿ ತಮ್ಮ ಪ್ರಾರ್ಥನೆ ಸಫಲವಾಗಲಿಲ್ಲವೆಂದು ಖಿನ್ನರಾಗಿ ತಮ್ಮ ಆಕಿಂಚನ್ಯವನ್ನು ಪುರುಷಕಾರಭೂತೆಯಾದ ಲಕ್ಷ್ಮೀದೇವಿಯ ಮೂಲಕ ತಿಳಿಯಪಡಿಸಿ ಅವನ ಕೃಪೆಗೆ ಪಾತ್ರರಾಗಬೇಕೆಂದು ನಿರ್ಣಯಿಸಿ ಶ್ರೀ ವೆಂಕಟಾದ್ರೀಶ್ವರನಲ್ಲಿ ಶರಣಾಗತಿಯನ್ನು ಮಾಡಿ ಆನಂದಿಸುತ್ತಾರೆ.

ನಾವೀಗ ಆಚಾರ್ಯ ಪಂಕ್ತಿಯಲ್ಲಿ ಕಡೆಯವರಾದ ಆಚಾರ್ಯ ಮಣವಾಳ ಮಹಾಮುನಿಗಳಿಂದ ತಿರುಮಲೆಯೊಡೆಯನಿಗೆ ಸಂದಿರುವ ಮಂಗಳಾಶಾಸನವನ್ನು ಪರಿಶೀಲಿಸೋಣ. ಇವರೂ ಸಹ ತಮಿಳಿನಲ್ಲಿ ಮೇಲೆ ಕಾಣಿಸಿದ ಈರ್ವರು ಮಹನೀಯರಂತೆ ಪ್ರತಿ ದಶಕಕ್ಕೆ ಒಂದು ಪಾಶುರದಂತೆ ರಚನೆ ಮಾಡಿ ತಿರುವಾಯ್ಮೊಳಿ ಸಾರಾರ್ಥ ವಿವರಣೆ ನೀಡುತ್ತಾರೆ. ಇವರ ರಚನೆಯ ವಿಶೇಷ ಇಂತಿದೆ. ತಿರುವಾಯ್ಮೊಳಿಯ ದಶಕದ ಮೊದಲನೆ ಪದ ಮತ್ತು ಕಡೆಯ ಪದಗಳನ್ನೇ ತಮ್ಮ ಪಾಶರದ ಆದ್ಯಂತ ಪದಗಳನ್ನಾಗಿ ಬಳಸುತ್ತಾರೆ. ಆದಷ್ಟು ಆ ದಶಕಗಳಲ್ಲಿ ಬಳಕೆಗೊಂಡ ಪದಗಳನ್ನೇ ಬಳಸುತ್ತಾರೆ. ಪ್ರತಿ ಪಾಶುರದಲ್ಲೂ ನಮ್ಮಾಳ್ವಾರ್ ಅವರನ್ನು ಶರಣಾಗತಿ ಮಾಡುತ್ತಾರೆ. ಈ ಪಾಶುರಗಳೆಲ್ಲಾ ಅಂತ್ಯಾದಿಯಲ್ಲಿರುವುದು ಮತ್ತೊಂದು ವಿಶೇಷ. ಈ ರೀತಿ ಚಿಕ್ಕ ಪದ್ಯಗಳಲ್ಲಿ ಇಷ್ಟೊಂದು ಅಂಶಗಳನ್ನು ತುಂಬಿ ಆ ವಿಷಯವನ್ನೇ ಪ್ರತಿಪಾದಿಸುವುದಕ್ಕೆ ಕವಿಯ ಪ್ರತಿಭೆ ಅಪೂರ್ವವೇ ಆಗಿರಬೇಕು. ಶ್ರೀ ಮಣವಾಳ ಮಹಾಮುನಿಗಳು ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯ ವ್ಯಾಖ್ಯಾನ ವಿವರಿಸುವುದರಲ್ಲಿ ಅದ್ವಿತೀಯರು. ಇವರಿಗೆ ಈ ಅದ್ಭುತಶಕ್ತಿ ಇದ್ದುದರಿಂದಲೇ ಇವರನ್ನು ವಿಶದವಾಕ್ ಶಿಖಾಮಣಿ ಎಂದು ಜನ ಆದರಿಸಿದರು. ಇವರನ್ನು ಅಪೂರ್ವ ಭಾಷ್ಯಕಾರರೆಂದು ಬಣ್ಣಿಸಿದರು. ಆಚಾರ್ಯ ರಾಮಾನುಜರೇ ಮಣವಾಳ ಮಹಾಮುನಿಗಳಾಗಿ ಪುನರವತಾರವೆತ್ತಿ ಶ್ರೀ ವೈಷ್ಣವ ತತ್ವ ಇದಮಿತ್ಥಂ ಎಂದು ಮತ್ತೊಮ್ಮೆ ಅರಿವು ಮಾಡಿಕೊಟ್ಟರು ಎಂದು ಶ್ರೀ ವೈಷ್ಣವರು ನಂಬುತ್ತಾರೆ.

ತಿರುವಾಯ್ಮೊಳಿಯ ಮೂರನೇ ಶತಕದ ಮೂರನೇ ದಶಕದ ಸಾರ ರೂಪ ಇಂತಿದೆ--

ಒಳುವಿಲಾಕ್ಕಾಲ ಮುಡನಾಹಿ ಮನ್ನಿ
ವಳುವಿಲಾ ವಾಳ್ ಶೆಯ್ಯಮಾಲುಕ್ಕು
ಎಳುಶಿಹರ
ವೇಂಗಡತ್ತು ಪಾರಿತ್ತ, ಮಿಕ್ಕನಲಂ
ಶೇರ್‌ಮಾರನ್
ಪೂಂ ಕಳಲ್ಗೆ ನೆಂಜೇ ಪುಗಳ್

ಎಡಬಿಡದೆ ಸರ್ವಕಾಲದಲ್ಲೂ (ಎಂದರೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ) ಭಗವಂತನಿಗೆ ಎಲ್ಲಾ ಬಗೆಯ ಸೇವೆಯನ್ನೂ ಉನ್ನತವಾದ ಏಳು ಶಿಖರಗಳಿಂದ ಕೂಡಿದ ಶ್ರೀ ವೆಂಕಟಾಚಲದಲ್ಲಿ ಮಾಡಬೇಕೆಂದು ಬಯಸಿದ ಪರಮಭಕ್ತರಾದ ನಮ್ಮಾಳ್ವಾರ್ ಅವರ ಮಲರಡಿಯನ್ನು ಸಂಕೀರ್ತಿಸು ಹೃದಯವೇ ಎನ್ನುತ್ತಾರೆ ಆಚಾರ್ಯ ಮಣವಾಳ ಮಹಾಮುನಿಗಳು.

ಇದೇರೀತಿ ಷಷ್ಠಮಶತಕದ ದಶಮದಶಕದ ಸಾರಾಂಶ ಇಂತಿದೆ--

ಉಲಹುಯ್ಯಮಾಲ್ ನಿನ್ರವುಯರ್
ವೇಂಗಡತ್ತೇ
ಅಲರ್ ಮಹಳ್ಳೆ ಮುನ್ನಿಟ್ಟವನ್
ತನ್ ಮಲರಡಿಯೇ
ವನ್‌ಶರಣಾಯ್ ಚ್ಚೇರ್ನ್ದ ಮಹಿಳ್
ಮಾರನ್ ತಾಳಿಣ್ಣೆಯೇ
ಉನ್‌ಶರಣಾಯ್ ನೆಂಜವೇ ! ಉಳ್

ಲೋಕೋಜ್ಜೀವನವಾಗಲೆಂದು ಸಂಕಲ್ಪಿಸಿ ಭಗವಂತನು ನೆಲಸಿರುವ ಎತ್ತರವಾದ ತಿರುವೇಂಗಡಪರ್ವತದಲ್ಲಿ ಹೂವಿನಲ್ಲಿ ಜನಿಸಿದ ಲಕ್ಷ್ಮಿಯನ್ನು (ಪದ್ಮಾವತಿಯನ್ನು) ಪುರುಷಕಾರವಾಗಿ ಮುಂದಿಟ್ಟುಕೊಂಡು ಭಗವಂತನ ಪಾದಪದ್ಮಗಳನ್ನೇ ದೃಢವಾಗಿ ಉಪಾಯವೆಂದು ಆಶ್ರಯಿಸಿದ ವಕುಳಾಭರ

ಣರಾದ ನಮ್ಮಾಳ್ವಾರ್ ಅವರ ಪಾದಗಳನ್ನೇ ನಿನಗೆ ಉತ್ತಾರಕವೆಂಬುದಾಗಿ ನೆನೆ ಎಲೈ ಮನಸ್ಸೇ. ಮಣವಾಳ ಮಹಾಮುನಿಗಳು ಶ್ರೀನಿವಾಸನಿಗೆ ಒಂದು ಮಂಗಳ ಶ್ಲೋಕವನ್ನು ರಚಿಸಿದ್ದಾರೆಂದು ತಿಳಿದುಬರುತ್ತದೆ. ಅದೇ ಶ್ರೀ ವೈಷ್ಣವರು ಆದರದಿಂದ ಅನುಸಂಧಾನ ಮಾಡುವ--

ಶ್ರಿಯಃ ಕಾಂತಾಯ ಕಲ್ಯಾಣ
ನಿಧಿಯೇ ನಿಧಯೇರ್ಥಿನಾಂ
ಶ್ರೀ ವೇಂಕಟ ನಿವಾಸಾಯ
ಶ್ರೀನಿವಾಸಾಯ ಮಂಗಳಂ

ಶ್ರಿಯಃಪತಿಯಾಗಿಯೂ, ಕಲ್ಯಾಣ ಗುಣಗಳಿಗೆ ನಿಧಿಯಾಗಿಯೂ ಅರ್ಥಿಗಳಿಗೆ ಐಶ್ವರ್ಯ ಪ್ರದನಾಗಿಯೂ ವೇಂಕಟಾದ್ರಿ ನಿಲಯನಾಗಿಯೂ ಇರುವ ಶ್ರೀನಿವಾಸ (ಶ್ರೀ ಎಂದರೆ ಸರ್ವವಿಧವಾದ ಸಮೃದ್ಧಿಗಳಿಂದ ಕೂಡಿದವನು) ನಿಗೆ ಮಂಗಳವಾಗಲಿ ಎನ್ನುವ ಅರ್ಥ ಇದರದ್ದು.

ಇವರೊಂದಿಗೆ ಆಚಾರ್ಯರುಗಳ ಕಾಲಮುಕ್ತಾಯಗೊಂಡರೂ ಮುಂದೆ ಬರುವ ಆಚಾರ್ಯರು ಕೆಲವರು ಅತಿಶಯ ರೀತಿಯಲ್ಲಿ ಶ್ರೀನಿವಾಸನನ್ನು ಭಜಿಸಿ ಕೃತಾರ್ಥರಾಗಿದ್ದಾರೆ. ಇವರಲ್ಲಿ ಮುಖ್ಯರಾದವರು ಪ್ರತಿವಾದಿಭಯಂಕರ ಅಣ್ಣನ್ ಎನ್ನುವ ಆಚಾರ್ಯರು. ಇವರೇ ಶ್ರೀನಿವಾಸನ ಸುಪ್ರಭಾತ, ವೆಂಕಟೇಶಸ್ತೋತ್ರ, ವೆಂಕಟೇಶ ಪ್ರಪತ್ತಿ ಮತ್ತು ಮಂಗಳಂ -- ಈ ನಾಲ್ಕು ಸ್ತೋತ್ರಗಳನ್ನು ರಚಿಸಿರುವ ಮಹಾನುಭಾವರು. ಇವರು ಆಚಾರ್ಯ ಮಣವಾಳ ಮಹಾಮುನಿಗಳ ಆಪ್ತ ಶಿಷ್ಯರು. ಇವರ ಈ ನಾಲ್ಕು ಸ್ತೋತ್ರಗಳು ಶ್ರೀನಿವಾಸನ ಭಕ್ತರಿಗೆಲ್ಲಾ ಚಿರಪರಿಚಿತವಾದವು. ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರು ಈ ಕೃತಿಗಳನ್ನು ಮನೋಹರವಾಗಿ ಗಾಯನಮಾಡಿದ್ದಾರೆ. ತಿರುಮಲೆಯಲ್ಲಿ ಯಾವಾಗಲೂ ಈ ಕೃತಿಗಳು ರಿಂಗಣ ಗುಣಿಸುತ್ತಾ ಭಕ್ತರ ಹೃದಯವನ್ನು ಸೂರೆಗೊಂಡಿವೆ.

ಸಂಸ್ಕೃತದ ಹಿರಿಯ ಕವಿಯೆಂದು ಪ್ರಸಿದ್ಧವಾಗಿರುವ ಲಕ್ಷ್ಮೀಸಾಹಸ್ರಿಯನ್ನು ರಚಿಸಿ ಕೀರ್ತಿಶಾಲಿಯಾದ ವೆಂಕಟಾಧ್ವರಿಯು ತನ್ನ ವಿಶ್ವಗುಣಾದರ್ಶ ಚಂಪೂ ಎನ್ನುವ ಗ್ರಂಥದಲ್ಲಿ ತಿರುಮಲೆಯನ್ನೂ ಅದರ ಸ್ವಾಮಿಯಾದ ಶ್ರೀನಿವಾಸನನ್ನೂ ಹಲವು ಚಮತ್ಕಾರಪೂರ್ಣವಾಗಿ ಹೆಣೆದಿರುವ ವೃತ್ತಗಳಲ್ಲಿ ಅದ್ಭುತವಾಗಿ ಸಂಕೀರ್ತಿಸಿದ್ದಾರೆ. ಈ ಸ್ತೋತ್ರಗಳನ್ನು ಓದುವುದೇ ಆನಂದದಾಯಕವಾಗಿದೆ. ಇದರ ಒಂದು ಪದ್ಯವನ್ನು ಮಾತ್ರ ಇಲ್ಲಿ ಉದ್ಧರಿಸುತ್ತೇನೆ. ವೆಂಕಟಾಧ್ವರಿ ಪದಗಳೊಂದಿಗೆ ವಿನೋದವಾಗಿ ಕಾವ್ಯದಲ್ಲಿ ವಿಹರಿಸುವುದು ಅವರ ಹಿರಿಮೆ.

ವಿವಿಧ ನಿಗಮಸಾರೇ ವಿಶ್ವರಕ್ಷೈಕ ಧೀರೇ
ವೃಷ ಶಿಖರಿವಿಹಾರೇ ವಕ್ಷಸಾಶ್ಲಿಷ್ಟಧಾರೇ
ಭಗವತಿಯದುವೀರೇ ಭಕ್ತ ಬುದ್ಧೇ ರದೂರೇ
ಭವತುಚಿರಮದೂರೇ ಭಾವನಾನಿರ್ವಿಕಾರೇ

ಮತ್ತೊಂದು ಗದ್ಯ ಪ್ರಬಂಧ ಹೈದರಾಬಾದ್ ಆಕಾಶವಾಣಿಯಿಂದ ಆಗಾಗ ಪ್ರಸಾರಗೊಳ್ಳುತ್ತ ಭಕ್ತರ ಮನಸ್ಸನ್ನು ಆಕರ್ಷಿಸುತ್ತದೆ. ಅದೇ ಶ್ರೀ ವೆಂಕಟೇಶ ಗದ್ಯವೆಂಬ ಪ್ರಬಂಧ. ಇದರ ಭಾಷೆ, ಭಾವ, ಓಟ, ಶೈಲಿ, ವಿವರ ಎಲ್ಲವೂ ಶ್ರೀನಿವಾಸನಿಗೆ ಅತ್ಯಂತ ಆಪ್ಯಾಯಕವಾಗಿದೆ. ಇದನ್ನು ರಚಿಸಿದವರು ತಿರುಮಲೆಯಲ್ಲಿ ಪುಷ್ಪಕೈಂಕರ್ಯವೆಸಗಿದ ಶ್ರೀ ಅನಂತಾಚಾರ್ಯರ ವಂಶಸ್ಥರೂ ವಿದ್ವದ್ವರರೂ ಆಗಿದ್ದ, ಶ್ರೀ ಪುರಿಶೈರಂಗಾಚಾರ್ಯರೆಂಬ ಆಚಾರ್ಯರು. ಈ ದಂಡಕವು ಅದ್ಭುತವಾಗಿದ್ದು ಭಕ್ತ, ಭಾವುಕಜನರ ಕಣ್ಮುಂದೆ ಶ್ರೀನಿವಾಸನ ದಿವ್ಯಮಂಗಳ ವಿಗ್ರಹವನ್ನು ಪ್ರತ್ಯಕ್ಷಗೊಳಿಸುತ್ತದೆ.

ಈ ರೀತಿ ಆಚಾರ್ಯವರ್ಯರುಗಳಿಂದ ಅನೇಕವಿಧವಾಗಿ ಪ್ರಶಂಸಿಸಲ್ಪಟ್ಟಿರುವ ನಮ್ಮ ಕುಲದೈವ ಶ್ರೀನಿವಾಸನಿಗೆ ಈ ನನ್ನ ಲೇಖನರೂಪವಾದ ಮಾಲಿಕೆಯನ್ನು ಪರಮಭಕ್ತಿಯೊಡನೆ ಸಮರ್ಪಿಸುತ್ತೇನೆ.

--ಓಂ ಶಮ್--

* * * * * * * * *

# ವಿಭೀಷಣ ಶರಣಾಗತಿ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್.

ರಾವಣಾನುಜನಗ್ರಜಂಗೊದರಿ ಪರುಷೋಕ್ತಿ
ವಿಶಿಖಗಳ, ಸುಮುಹೂರ್ತ ದೊಳ್ಕೈತರುತಿರ್ದನಾ
ರಾಘವನ ಸನ್ನಿಧಿಗೆ, ಮೇರುಪರ್ವತದಂತೆ
ಉನ್ನತಾಕೃತಿಯ, ದಿವ್ಯಾಭರಣ ಕಾಂತಿ
ಸಿಡಿಲು ಹೊರಳಿ ಹೊಗರೆದ್ದಂತೆಸೆದು ಕಂಗೊಳಿಪ
ವಿಭೀಷಣನ ಕಂಡರು ಕಪಿನಾಯಕರು ಗಗನ
ಮಧ್ಯದೊಳು ದೆಂಬ್ಬಳದ ಬಿಗುಹಿನಲಿ ಸಲೆಸಿಲುಕಿ,
ನೀರುಂಡ ಮುಗಿಲಂತೆ ನೀಲತನು, ಗಿರಿಯಂತೆ
ಪೀನಾಂಸಮೊಪ್ಪುತಿರೆ, ಭೂಷಣಂಗಳ ಧರಿಸಿ,
ಗದೆಗೊಂಡು ವಜ್ರಧರ ನಿಂದ್ರಂಗೆ ಸರಿಯೆನಿಸಿ

ವೈವಿಧ್ಯಮಯಾಭರಣ ಕವಚಾಯುಧಂಗಳ
ಧರಿಸಿದಾಭೀಳ ವಿಕ್ರಮದ ಸಚಿವ ಚತುಷ್ಟಯ
ಸಹಿತ ಐದನೆಯಾತ ವಿಭೀಷಣನೈದಿದನು,
ನೋಡಿರೈ ಎಂದಾಜಿವೀರನಾ ಮತಿವಂತ
ಸುಗ್ರೀವನೊಂದಿನಿಸು ಚಿಂತಿಸುತ ನುಡಿದನೀ
ವಾಕ್ಯಗಳ ಹನುಮದಾದಿ ಪ್ಲವಗ ಪತಿಗಳ್ಗೆ
"ಸರ್ವಾಯುಧೋಪೇತನೊರ್ವ ರಕ್ಕಸನಿಲ್ಲಿ
ಬರುತಿಹನು ನೋಡಿರೈ ನಾಲ್ವರನುಚರರೊಡನೆ
ನಿರುತದಿಂದೆಮ್ಮ ಕೊಲೆಗಿವನೆ ಜವರಾಯನೆನೆ"
ಆ ಕ್ಷಣವೆ ವಾನರೋತ್ತಮರೆಲ್ಲರೊಂದಾಗಿ

ಸಾಲ ತರು ಶೈಲಗಳ ಕೈಗೆತ್ತಿ, ಕಪೀಶ್ವರ,
ಅಪ್ಪಣೆಯ ನೀಡೆಮಗೆ, ಪಾಪಿಷ್ಠ ರಣಹೇಡಿ
ರಕ್ಕಸರ ನಿಕ್ಕುವೆವು ರಣ ಚಂಡಿಗುಣಿಸಾಗಿ
ಇಂತೆಂಬ ಪರಸ್ಪರ ಗರ್ಜನೋದ್ವೇಗದೊಳು
ಚೀರಿಡಲು, ಸೂಕ್ಷ್ಮಮತಿ ವಿಭೀಷಣ ನಗ್ಗಡಲ
ಬಡಗಣಾಕಾಶ ಪದದೊಳು ನಿಂತು, ಭಯರಹಿತ
ಭಾವದಿಂದರಚಿದನು ಮೊರೆಯಿಟ್ಟು ಕಪಿಯೂಥ
ನಾಯಕರ ನೆರವಿಯೊಳು ಸುಗ್ರೀವರಾಜಂಗೆ
ಮನಮುಟ್ಟುವಂದದೊಳು :
"ಕೇಳಿರೈ ವಾನರರೆ
ನಡೆಗೇಡಿ ರಾವಣಾಹ್ವಯಯ ರಾಕ್ಷಸಾಧಿಪತಿ

ರಕ್ಕಸ ನೆನ್ನಗ್ರಜನು, ನಾನವನ ತಮ್ಮನೈ;
ವಿಭೀಷಣನೆಂದು ಕರೆಯುವ ರೆನ್ನನಾದರಿಸಿ
ಎನ್ನಗ್ರಜನು ಜನಸ್ಥಾನದಿಂ ಸೀತೆಯನು
ಕದ್ದುಯ್ದು ಗಗನಾಧ್ವದೊಳು ಜಟಾಯುವನಿಕ್ಕಿ
ಕಪುದೈನ್ಯದಿಂದಳುವನಾಥೆಯನಶೋಕವನ
ಗರ್ಭದೊಳಸುರೆಯರ ಕಾಪಿನೊಳು ಸೆರೆಗೆಯ್ದು
ಪಾತಕವಿದಕ್ಷಮ್ಯ; ಆಕೆಯನು ರಾಘವನ
ಚರಣ ಕಮಲ ದ್ವಂದ್ವಕೊಪ್ಪಿಪುದೆ ಲೇಸೆಂದು
ಕಾಡಿ ಬೇಡಿದರು, ಪೂರ್ವಜನಂತಃಕರಣ
ಕರಗದಿರೆ, ಪರಸತಿಗೆ ಮನಮಿತ್ತ ತಿಳಿಗೇಡಿ

ನಿಜಾನುಜನೆನ್ನನಡಿಯಾಳೆಂಬ ಭಾವದೊಳು
ಕರುಳಿರಿವ ಕಠಿಣೋಕ್ತಿಗಳನಾಡಿ ಹೀಗಳೆಯೆ,
ನೆಚ್ಚಿನ ಮಡದಿ ಮಕ್ಕಳೆಲ್ಲರನು ನಾಂ ತೊರೆದು
ಬಂದಿಹೆನು ಸರ್ವಲೋಕ ಶರಣ್ಯನಪ್ರತಿಮ
ವಾತ್ಸಲ್ಯ ಸಾರನಿಧಿ, ಶರಣರನು ತಲೆಗಾಯ್ವ
ಕಾರುಣ್ಯಮಯ ಮೂರ್ತಿ ರಾಘವೇಶ್ವರನೆಂದು
ಜವ ಗತಿಯ ಲಾಗಿನೊಳವನ ಪಾದ ಪದ್ಮಗಳೆ
ಗತಿಯೆಂದು ನೆರೆ ನಂಬಿ ಬಂದಿಹೆನು, ತಳುವದಿರೆ
ಪೇಳಿರೈ; ಆನುಕೂಲ್ಯ ಸಂಕಲ್ಪ ಮೇಣ್ಪ್ರಾತಿಕೂಲ್ಯ
ವರ್ಜನವ ನಾನೆಸಗಿ ಮಹಾವಿಶ್ವಾಸವನು

ರಾಘವೇಶ್ವರನ ಪಾದಪಂಕಜದೊಳ್ನಲಸಿ,
ನೀವೆ ಗತಿ ಮತಿಯೆಂದು ನೆರೆನಂಬಿ ಬಂದಿಹೆನು
ವಿಭೀಷಣನೆಂದೊರ್ವ ನತಿದೀನನೆಂದರಿತು
ತುರಿಪದಿಂ ಬಿನ್ನಯಿಪುದೆನ್ನಾರ್ತ ಸಂಗತಿಯ"

ಇಂತೆಂಬ ರಕ್ಕಸನ ರೋದನವ ನವಧರಿಸಿ
ಸುಗ್ರೀವ ನೋಡೋಡಿ ರಾಘವನ ಸನ್ನಿಧಿಗೆ



ಸಾರ್ತಂದು ತತ್ತರಿಸಿ ಏದುಸಿರು ತಳಮಳಿಸೆ,
"ರಾವಣಾನುಜನಂತೆ, ವಿಭೀಷಣಾಖ್ಯನಂತೆ,
ನಿಜಸಚಿವ ಚತುಷ್ಟಯ ದೊಡಗೂಡಿ ಬಂದಿಹನು
ನಿಮ್ಮಡಿಗೆ ಶರಣಾಗಿ; ಓ ರಾಮ, ನಿಮಗಿಂದು

ಬಯಸುವೆನು ಮಂಗಳವ; ವೈರಿಗಳ ಸಂಚರಿತು
ವಾನರರ ಹಿತಚಿಂತನೋಪಾಯ ದೊಳಗದ್ದಿ
ಕಾರ್ಯಾಕಾರ್ಯ ವಿವೇಕ, ಸೇನಾರಚನೆ ಮೇಣ್
ನಿಶ್ಚಿತೋಪಾಯ, ಗೂಢಚರ್ಯೆಗಳಾಳವನು
ಅರಿತು ವರ್ತಿಸಬೇಕು ಮೈಯೆಲ್ಲ ಕಣ್ಣಾಗಿ
ನಿಜರೂಪ ಪರಾವರ್ತನ ವಿದ್ಯೆಯೊಳು ಪರಮ
ಪರಿಣತರು ರಾಕ್ಷಸರು ವೀರರಾಪಡೆಯ ಕಣ್
ಮರೆಸಿ ತಾಗುವರು ಕಪಟೋಪಾಯ ಚಿಂತನೆಯ
ವಂಚಕರ ನೆಂದೆಂದು ನಂಬಲಾಗದು ಕಣಾ;
ವಿಭೀಷಣ ನಿವನಗ್ರಜನ ಗೂಢಚಾರನೆನೆ

ಛದ್ಮವೇಷಧರನಿವನೆಮ್ಮೊಡನೆ ಸಲೆ ಕಲೆತು
ನಿರುತದಿಂ ದೊಡೆಯುವನು ಒಕ್ಕಟ್ಟಿನನುನಯವ;
ಅಲ್ಲದಿರೆ ಸಮಯಸಾಧಕನಿವನು ಕೊಲ್ಲುವನು
ನಮ್ಮನೆಲ್ಲರನು ಚತುರಮತಿವಂತ ನೋರಣಿಸಿ;
ನಿಜಸೈನ್ಯ ವರ್ಧನೆಗೆ ಸನ್ಮಿತ್ರಸಂಗರರ,
ವನಗೋಚರರ ಪರಂಪರಾಗತ ಪಟುಭಟರ,
ವೇತನದ ಸೇವಕರ ಸಂಗ್ರಹಣೆ ಲೇಸಹುದು
ಸರ್ವಥಾ ಸರಿಯಲ್ಲ ನೆಚ್ಚುವುದು ಪರಬಲದ
ಸೈನಿಕರ; ಪ್ರಭೋ, ಆಜನ್ಮರಾಕ್ಷಸ ನಿವನು,
ನಿಜವೈರಿ ರಾವಣೇಶ್ವರನನುಜ; ಸ್ವಪಕ್ಷವ

ಬಿಟ್ಟಗಲಿ ಬಂದಪನಲ್ಲಿಂದ ನೇರಾಗಿ
ಹೆದೆಯೊದೆದ ವಿಷಸಿಕ್ತ ನಿಶಿತಾಸ್ತ್ರ ವೇಗದಲಿ
ನಂಬುವುದೆಂತೀ ವಿಭೀಷಣನ ? ನಿರುತದಿಂ
ರಾವಣನ ಗುಪ್ತಚರ ಸಾರ್ದಪನು ನುಸುಳಲ್ಕೆ
ಸಮಯೋಚಿತ ವೆಸಕದೊಳತಿ ನಿಪುಣ ನೀನಯ್ಯ;
ಕುಟಿಲ ರಾಕ್ಷಸ ನಿವನು ರಾವಣನ ದೇಹಾಗಿ
ಬಂದಿಹನು ಮಾಯಾವಿ ವಿಶ್ವಾಸ ಘಾತಕನು
ಸಂದೇಹ ಕೆಡೆಗೊಡದೆ ಪರಬಲವ ನೊಳಪೊಕ್ಕು
ಕೊಲ್ಲದೆ ಬಿಡನು ಇವನೆಲ್ಲರನು ಗಡ! ನೀನರಿಯ,
ಘೂಕ ಕೊಲ್ಲುವುದಲ್ತೆ ಕಾಕನಿಕರವ ಪೊಕ್ಕು?

ವಿಭೀಷಣ ನಿವನು ಪಾಪಾತ್ಮರಾವಣನ
ನಂಟನೈ; ಜುಟ್ಟು ಕಿತ್ತೊಡೆ ತೊಲಗುವುದೆ ಹುಟ್ಟು
ಗುಣ? ಆಣತಿಯ ನೀಡೆನಗೆ ಸಚಿವ ಚತುಷ್ಟಯ

ಸಹಿತ ಬಹು ತೀವ್ರ ದಂಡನೆ ವಿಧಿಸಿ ವಧಿಸುವೆನು
ವಿಭೀಷಣನಾ" ಕರಾಳರೋಷ ಮಹೋಗ್ರ ವೀರ
ವಾಕ್ಚತುರ ಕಪೀಶ್ವರ ಸುಗ್ರೀವ ನಿಂತೊರೆದು
ಮೋನಮಿರ್ದನು, ರಾಘವನ ಚಿಂತೆ ಕಾಡುತಿರೆ
ನಿಜಮನವ.

ಸಾವಧಾನದಿಂದವಧರಿಸಿ ಕಪಿ
ವರನ ವಾಗ್ವಿವರಗಳ ರಘುರಾಮ ಸೂಸಿದನು
ನಸು ನಗುತ ಸಲ್ಲಲಿತ ವಾಕ್ಯಗಳ ಮಲ್ಲಿಗೆಯ

ಸಮ್ಮುಖದ ಹನುಮದಾದಿ ಪ್ಲವಗಪತಿಗಳ್ಗೆ
ಆಗಳಾ ಶರಭ ಜಾಂಬವ ಮೈಂದಾದಿ
ವಾನರರೆರಗಿ, ವಿಭೀಷಣ ಸಾತ್ಮಶೋಧನೆಗೆ
ಸಮಯಮಿದು, ಪರಪಕ್ಷದಿಂ ಬಂದವನ ಬಿಡದೆ
ಶಂಕಿಸಲೆ ಬೇಕು; ತಮ್ಮಗುಟ್ಟನು ಬಚ್ಚಿಟ್ಟು
ಸಂದು ಕಂಡೊಡನೆ ಬಂದು ಬಿಡುವರು ಕೇಡಿಗರು
ಅವಘಾತವೆಸಗಲ್ಕೆ; ಗುಟ್ಟರಿಯ ಲಟ್ಟುವುದು
ಚಾಣಾಕ್ಷ ಚಾರರನು; ಕಟ್ಟುಗ್ರತರ ವೈರಿ
ರಾವಣಾಸುರ ಸೋಲಗದಿಂದ ಬಂದಿಹನು
ಕಾಲದೇಶಗಳ ಪರಿಮಿತಿಯ ನರಿಯದವಿವೇಕಿ,

ವಿಭೀಷಣನೆದೆ ಮಿಡಿದು ರಾವಣೇಶ್ವರನಂತ
ರಂಗವನರಿತು ನಿಮ್ಮಭಿಮತನ ನೆಸಗುವುದೆನೆ,
ಅಖಿಳ ಶಾಸ್ತ್ರಾಭ್ಯಾಸ ಸಂಜನಿತ ಸಂಸ್ಕಾರ
ಸಂಪನ್ನ ನತಿ ಮುಖ್ಯ ಸಚಿವನಾ ಹನುಮಂತ
ಬಿನ್ನಯಿಸಿದನು ಸಕಲ ಧರ್ಮಾರ್ಥ ಸಂಯುಕ್ತ
ಶ್ರವಣ ಸುಖ ಮಧುರೋಕ್ತಿ ವಿವರಗಳ ನಳವಡಿಸಿ
ಸರಳ ಸಂಗ್ರಹ ರೀತಿಯೊಳಿನಕುಲ ತಿಲಕರಿಗೆ
ಮನಮೆಚ್ಚುವಂದದೊಳು;
"ರಾಘವೇಶ್ವರನೆ ಕೇಳ್,
ಸುರುಗುರುವಿನಿಂ ಮಿಗಿಲೆನಿಪ ವಿಮಳ ಮತಿ ನೀನು,
ಮುಂಬಗೆವ ಸರ್ವಜ್ಞ, ನೀನೆತ್ತ ನಾನೆತ್ತ;

ವಾದದಲಿ ಮೇಲ್ವಾಯ್ವ ಬಾಯ್ಬಡುಕ ನಾನಲ್ಲ;
ನುಡಿ ಜಾಣ್ಮೆಎನಗಿಲ್ಲ, ನಿಜ ಸಚಿವ ಸಂಪುಟವ
ಮಾತಿನಲಿ ಸೋಲಿಸುವ ಶಪಥವನು ನಾನೊಲ್ಲೆ,
ನುಡಿವಾಸೆಯಿಂ ಮನಸೆಳೆವ ಗರ್ವವೆನಗಿಲ್ಲ;
ನಿಮ್ಮಡಿಯ ವಾತ್ಸಲ್ಯ ನಿರ್ಭರತೆ ಮನನವ
ಚೋದಿಪುದು ಮುಚ್ಚದಿರೆ ಬಿಚ್ಚುನುಡಿಯಾಡೆನುತ
ವಿಭೀಷಣ ನಂತರಂಗವ ನರಿವುದಸದಳವು,
ಗೂಢಚಾರರನಟ್ಟಿ ಫಲವೇನು? ನಿಮ್ಮಡಿಯೆ
ಗತಿಯೆಂದು ಬಂದೆರಗಿ ದೀನಂಗೆ ಶುಭಸಮಯ
ಶುಭದೇಶ ಸಂದಿಹುದು; ತನ್ನಣ್ಣನವಗುಣವ

ತಾಂ ಕಂಡು ಬೇಸತ್ತು ನಿಮ್ಮಡಿಯ ಪೌರುಷವ
ಮಿಗೆ ಮೆಚ್ಚಿ ಬಂದಿಹನು; ನೀನಾರು, ಏತಂದ
ಕತಮೇನೊ ಎಂಬನ್ನೆಯದ ಬೇಹುಗರ ಪ್ರಶ್ನೆ
ಕೆರಳಿಪುದವನ ಮನದೊಳಗೆ ಸಂಶಯವನೆನಲು
ಸುಲಭದಲಿ ತಾನೊಲಿದ ಕೆಳೆಯನನು ಹೀಗಳೆದು
ಹಗೆವನನು ತಕ್ಕೈಸಿ ಕರೆವುದನುಚಿತಮಲ್ತೆ ?
ವಿಷಾಹಿಯ ಮಡಿಲೊಳಗೆ ಲಾಲಿಸುತ ಪಾಲುಣಿಸಿ
ಮುತ್ತಿಡುವ ಗಾಂಪರಾರುಂಟು ಪೇಳ್ ಜಗದೊಳಗೆ ?
ಮುಗುಳುನಗೆ ಮಿನುಗುತಿರೆ ವಿಭೀಷಣನಾಸ್ಯದೊಳು
ಕಂಡೆನಂತರಂಗದ ಪರಿಶುದ್ಧ ಭಾವನೆಯ;

ನುಡಿವಾಗ ಕೇಡೆಣಿಪ ಕೌಟಿಲ್ಯ ಕಿಡೆಯಿಲ್ಲ,
ಮುಖಚರ್ಯೆ ಕೆಡಲಿಲ್ಲ, ಬಣ್ಣ ಬದಲಿಸಲಿಲ್ಲ,
ಕೊರಳಸೆರೆ ಬಿಗಿಯದಿರೆ ನಾಂ ಕಾಣೆನಾತನ
ಮಾತಿನೊಳು ಏರುಪೇರುಗಳ ಕಾಪಟ್ಯವನು
ಮುಖವೆ ಕನ್ನಡಿಯಲ್ತೆ ಮನವೊಕ್ಕ ಚಿಂತನೆಗೆ ?
ಮನೋಗತವ ಬಚ್ಚಿಡಲಸದಳವು ಮನುಜಂಗೆ
ದೇಶಕಾಲದೌಚಿತ್ಯವನರಿತ ಕಟ್ಟೆಸಕ
ನಿರುತದಿಂ ಫಲಿಸುವುದೆ ಖಂಡಿತವು ನೀನರಿಯ;
ರಘುಕುಲಾಂಬರ ಭಾನು ! ಹೆಂಗಳ್ದ ರಾವಣನ
ನಡೆನುಡಿಯ ಕಂಡಳುಕಿ, ವಾಲಿವಧೆ ಮತ್ತಾ

ಸುಗ್ರೀವನಭಿಷೇಕ ಸಂಗತಿಯನವಧರಿಸಿ
ಮಿಗೆ ಮೆಚ್ಚಿ ಬಂದಿಹನು ವಿಭೀಷಣನೆನಲಾತ
ಬಯಸುತಿಹನಿದು ಸತ್ಯ ಲಂಕಾಧಿಪತ್ಯವನು,
ಅಲಘು ಭುಜಬಲ ಭಾನು, ಕಡಲುಡೆಯ ಪೊಡವಿಯೊಳು
ನಿಮ್ಮಂಥ ಧೀಮಂತರಿನ್ನಾರ ನಾಂ ಕಾಣೆ
ರಕ್ಕಸನ ಋಜುಗುಣವ ನೊಪ್ಪವೊಡೆ ನೀಡುವುದು
ನಿಮ್ಮಡಿಯೊಳಾಶ್ರಯವ; ಅಂತಿಮದ ತೀರ್ಮಾನ
ಬಿಟ್ಟಿಹೆನು ನಿಮಗೆ"ನುತ ಹನುಮಂತ ತಾಳಿದನು
ಮೌನವನು.

ಹನುಮಂತನಿಂತೆನಲು ರಘುನಾಥ
ಚಿತ್ತದೊಳು ಬರೆದೊರೆದು ಗೆರೆನಗೆಯ ಸೂಸುತ್ತ,

"ಮಿತ್ರಭಾವದಿಂ ಮರೆಹೊಕ್ಕವರ ಸಲಹುವುದೆ
ಶೀಲ ವೆಮ್ಮದು ಕಣಾ ನಿಜ ಜೀವ ತೊಲಗಿದರು
ಶರಣರನು ರಕ್ಷಿಪುದೆ ಸದ್ಧರ್ಮ, ಸತ್ಯಮಿದು;
ಆರ್ತನಾಗಲಿ ಧೂರ್ತನಾಗಿರಲಿ ರಾವಣನೆ
ತಪ್ಪೊಪ್ಪಿ ಬೇಡಿಪಡೆ ತಲೆಗಾಯ್ವೆ ನೆಲ್ಲರನು;
ಒಂದೆಸಲ ನಿನ್ನವನು ತಾನೆಂದು ಮರೆವೊಗಲು
ಸಾಕು, ಸಲಹುವೆನು ಅಭಯವನಿತ್ತ ಖಿಳಜೀವ
ಜಾಲಗಳ; ಶರಣಾಗತ ರಕ್ಷಣೈಕ ವ್ರತ
ತನ್ನದೆನೆ ಸನ್ನಿಧಿಗೆ ತನ್ನಿರೈ ವಿಭೀಷಣನಾ"

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ,
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ||



# ಬ್ರಹ್ಮನ ಅಹಂಕಾರ ನಿರಸನ

---ಸಂತ ಹರಿಹರಾನಂದ ಸರಸ್ವತಿ.

ಸೃಷ್ಟಿಕರ್ತನಾದ ಬ್ರಹ್ಮದೇವನು ಅತಿ ದೀರ್ಘಾಯು ಅಲ್ಲದೇ ನಿರೋಗಿಯೂ ಹೌದು. ನಿರಂತರ ಸೃಷ್ಟಿಕಾರ್ಯವೇ ಅವನ ಕಾಯಕ. ಒಂದೆಡೆ ಅವನ ದೀರ್ಘಾಯುಷ್ಯದ ಪ್ರಮಾಣವನ್ನು ಹೀಗೆ ಹೇಳಿದೆ.

ಕೃತ, ತ್ರೇತಾ, ದ್ವಾಪರ, ಕಲಿ -- ಎಂಬ ಈ ನಾಲ್ಕುಯುಗಗಳೂ ಒಂದು ಸಾವಿರ ಬಾರಿಯಾದರೆ ಒಂದು ಹಗಲಾಗುತ್ತದೆ. ಮತ್ತೆ ಸಾವಿರ ಬಾರಿಯಾದರೆ ಒಂದು ರಾತ್ರಿ. ಇವು ಎರಡೂ ಸೇರಿದರೆ ಬ್ರಹ್ಮನಿಗೆ ಒಂದು ದಿನ. ಇಂತಹುದು ಏಳು ದಿನಗಳು ಒಂದು ವಾರ. ಎರಡುವಾರ ಸೇರಿ ಒಂದು ಪಕ್ಷ. ಇಂತಹುದು ಎರಡು ಪಕ್ಷಗಳಿಗೆ ಒಂದು ಮಾಸ. ಇಂತಹ ಆರು ಮಾಸಗಳು ಸೇರಿ ಒಂದು ಅಯನ. ಎರಡು ಅಯನಗಳಿಗೆ ಒಂದು ಸಂವತ್ಸರ. ಇಂತಹ ನೂರು ಸಂವತ್ಸರಗಳಾದರೆ ಒಂದು ಬ್ರಹ್ಮಪಟ್ಟವಾಗುತ್ತದೆ. ಇಂತಹ ದೀರ್ಘಾಯುಷ್ಯದ ಬಗೆಗೆ ಬ್ರಹ್ಮನಿಗೆ ಒಮ್ಮೆ ಅಹಂಕಾರವಂಕುರಿಸಿತು. ನನ್ನ ಸಮಾನರು, ಸರಿಗಟ್ಟುವವರು ಯಾರೂ ಇಲ್ಲವೆಂದು ಬೀಗುತ್ತಾ ವೈಕುಂಠಕ್ಕೆ ಬಂದು ಶ್ರೀಮನ್ನಾರಾಯಣನಲ್ಲಿ ಕೂಡ ತನ್ನ ಅತಿದೀರ್ಘವಾದ ಆಯುಷ್ಯದ ಬಗೆಗೆ ಅರಿಕೆಮಾಡಿ, ತನಗೆ ಸಮಾನರು ಈ ದಿಶೆ ಯಾರೂ ಇಲ್ಲ ಅಲ್ಲವೇ? ಎಂದು ಪ್ರಶ್ನಿಸಿದ. ಬ್ರಹ್ಮನ ಮಾತುಗಳನ್ನು ಕೇಳಿದ ನಾರಾಯಣನು -- ಸೃಷ್ಟಿಕರ್ತನನ್ನು ಕುರಿತು -- ಅಯ್ಯಾ ವಿಧಾತಾ, ಸಕಲಲೋಕದ ಪರಮೇಷ್ಠೀ ಎನ್ನಿಸಿದ ನೀನೇ ಹೀಗೆ ಅಹಂಕಾರಪಟ್ಟರೆ ಹೇಗೆ ? ಲೋಕದ ಗತಿ ಏನು ? ಬಾ, ಹಾಗೆಯೇ ಸ್ವಲ್ಪ ಸಂಚರಿಸಿಕೊಂಡು ಬರೋಣವೆಂದು ಬ್ರಹ್ಮನನ್ನು ಕರೆದುಕೊಂಡು ನಾರಾಯಣನು ಭೂಲೋಕಕ್ಕೆ ಬಂದು ನೈಮಿಷಾರಣ್ಯವನ್ನು ಸೇರಿದ. ಅಲ್ಲಿ ಒಂದೆಡೆ "ರೋಮಚ"ನೆಂಬ ಓರ್ವ ಮಹಾ ಋಷಿಯು ತಪಸ್ಸು ಮಾಡುತ್ತಿದ್ದ. ಆತನನ್ನು ಸಮೀಪಿಸಿ ನಿನ್ನ ಆಯುಷ್ಯದ ಪ್ರಮಾಣವೆಷ್ಟು? ನಿನಗೆ ಮುಕ್ತಿ ಎಂದು ? ಎಂದು ಪ್ರಶ್ನಿಸಿದ. ರೋಮಚನು-- ಹೇ! ಪ್ರಭು, 'ರೋಮಚ'ನೆಂದು ನನ್ನನ್ನು ಕರೆಯುತ್ತಾರೆ. ನನ್ನ ಮೈನಲ್ಲಿ ಮೂರುಕೋಟಿ ಐವತ್ತುಲಕ್ಷ ರೋಮಗಳಿವೆ. ನನ್ನ ಮೈಯ ಒಂದು ರೋಮ ಕೆಳಗೆ ಬೀಳಬೇಕಾದರೆ ಒಂದು ಬ್ರಹ್ಮಪಟ್ಟವಾಗಬೇಕು. ಮೂರು ಕೋಟಿ ಐವತ್ತು ಲಕ್ಷ ರೋಮಗಳೂ ನಷ್ಟವಾದಾಗ ನನಗೆ ಮುಕ್ತಿ ದೊರೆಯುತ್ತದೆ. ಎಂದರೆ ಅಷ್ಟು ಬ್ರಹ್ಮಪಟ್ಟವಾಗಬೇಕು ಎಂದು ಅರ್ಥ ಎಂದು ನುಡಿದ. ವಿಷ್ಣುವುಬ್ರಹ್ಮನ ಕಡೆ ತಿರುಗಿನೋಡಿದ. ಅವನತಮುಖಿಯಾಗಿ ನಿಂತಿದ್ದ ಚತುರ್ಮುಖನು ಮಾತನಾಡಲೇ ಇಲ್ಲ. ತರುವಾಯ ಇಬ್ಬರೂ ತಮ್ಮ ತಮ್ಮ ವಾಹನವೇರಿ ಅರಣ್ಯದಲ್ಲಿ ಮುಂದೆ ಹೊರಟರು. ಅಲ್ಲಿ ಸ್ವಲ್ಪದೂರದಲ್ಲಿ ಒಂದು ಮರದ ಕೆಳಗೆ ಓರ್ವ ಋಷಿಯು ಒಂಟಿಕಾಲ್ಲಲ್ಲಿ ನಿಂತು ತಪಸ್ಸು ಮಾಡುತ್ತಿದ್ದ. ಆತನ ಹೆಸರು ಅಷ್ಟಾವಕ್ರನೆಂದು. ಶ್ರೀಮನ್ನಾರಾಯಣನು ಅವನನ್ನು ಕುರಿತು -- ನಿನ್ನ ಆಯುಷ್ಯವೆಷ್ಟು ? ನೀನು ಈ ಲೋಕದಿಂದ ಬಿಡುಗಡೆ ಹೊಂದುವುದು ಯಾವಾಗ? ಎಂದು ಪ್ರಶ್ನಿಸಿದ. ಅಷ್ಟಾವಕ್ರನು -- ಸ್ವಾಮಿ, ನನ್ನ ಶರೀರದಲ್ಲಿ ಎಂಟು ಕವಲುಗಳಿವೆ -- ಅವು ವಕ್ರವಕ್ರವಾಗಿವೆ. ಈ ಅಷ್ಟಾವಕ್ರತ್ವವು ಹೋದಾಗ ನನಗೆ ಮುಕ್ತಿ ದೊರೆಯುತ್ತದೆ. ಹಾಂ! ನಿಲ್ಲಿ ನನ್ನ ಶರೀರವು ನೆಟ್ಟಗಾಗಿ ನಾನು ಮುಕ್ತನಾಗಬೇಕಾದರೆ -- "ರೋಮಚ"ನು ಎಂಟುಬಾರಿ ಸತ್ತು ಹುಟ್ಟಬೇಕು. ಹುಟ್ಟಿ ಸಾಯಬೇಕು ಎಂದು ನುಡಿದ. ಅವನ ಮಾತನ್ನು ಕೇಳಿದ ಬ್ರಹ್ಮದೇವನು ನಾಚಿ ನೀರಾದ. ಅವನ ಉಸಿರೇ ನಿಂತಂತಾಯಿತು. ಅವನ ಅಹಂಕಾರ ಮೂಲೋತ್ಪಾಟನವಾಯಿತು.





# ಪ್ರಕಟಣೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್‌ರಸ್ಥೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೯ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

***ತಿ. ತಿ. ದೇ.***

# ಪುರಂದರೋಪನಿಷತ್ ಸಾರ

ರಾಗ--ಪಂತುವರಾಳಿ ತಾಳ--ಅಟ್ಟ

ವ್ಯಾಪಾರ ನಮಗಾಯಿತು ಪ
ಶ್ರೀಪತಿ ಪಾದಾರವಿಂದ ಸೇವೆಯೆಂಬೊ ಅ

ಹರಿ ಕರುಣವೆ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂಥ ೧

ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ
ನಾಲಗೆ ಎಂದೋದು ಲೇಖನಿಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ ೨

ಮುಂದಣ ಆಗಮ ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು
ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ
ಸಂದಾಯವನು ಮಾಡಿ ಕತಬಿ ಹರಿಸಿಬಿಟ್ಟ ೩

ನುಡಿ ನುಡಿಗಾನಂದ ಬಾಷ್ಪ ರೋಮಾಂಚನ
ಮುಡುಪಿನೊಳಗೆ ಇಟ್ಟ ಕೈ ಜೀತವು
ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ ೪

ಕಂಡ ಕಂಡವರಿಗೆ ಕಾರ್ಪಣ್ಯವ ಬಿಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ ೫

ರಾಗ--ಆನಂದಭೈರವಿ ತಾಳ--ಅಟ್ಟ

ಗಿಳಿಯು ಪಂಜರದೊಳಿಲ್ಲ ನರಹರಿಯೆ ಬರಿ ಪಂಜರವಾಯಿತಲ್ಲ ಪ

ಅಕ್ಕ ಕೇಳೆ ಎನ್ನ ಮಾತು ಚಿಕ್ಕದೊಂದು ಗಿಳಿಯ ಸಾಕಿದೆ
ಅಕ್ಕ ನಾನಿಲ್ಲದ ವೇಳೆ ದೆಕ್ಕು ಕೊಂಡು ಹೋಯಿತಯ್ಯೊ ೧

ಅರ್ಥಿಲೊಂದು ಗಿಳಿಯ ಸಾಕಿ ಮುತ್ತಿನ್ಹಾರವನ್ನು ಹಾಕಿದೆ
ಮುತ್ತಿನ್ಹಾರ ಕೊಂಡು ಗಿಳಿಯು ಎತ್ತಲ್ಹಾರಿ ಹೋಯಿತಯ್ಯೊ ೨

ಹಸುರು ಬಣ್ಣದ ಗಿಳಿಯು ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯ ತಾನು ಹಸನಗೆಡಿಸಿ ಹೋಯಿತಯ್ಯೊ ೩

ರಾಮ ರಾಮ ಎಂಬ ಗಿಳಿ ಕೋಮಲ ಕಾಯದ ಗಿಳಿ
ಸಾಮಜ ಪೋಷಕ ತನ್ನ ಪ್ರೇಮದಿ ಸಾಕಿದ ಗಿಳಿ ೪




ಒಂಬತ್ತು ಬಾಗಿಲ ಮನೆಯೊಳ್ ತುಂಬಿದ ಸಂದಣಿ ಇರಲು
ಕಂಭ ಮುರಿದು ಡಿಂಬ ಬಿದ್ದು ಅಂಬರಕ್ಕೆ ಹಾರಿ ಹೋಯಿತು ೫

ಮುಪ್ಪಾಗದ ದೆಣ್ಣೆ ತಿಂದು ತಪ್ಪದೆ ಹಾಕಿದ ಹಾಲ
ಒಪ್ಪದಿಂದ ಕುಡಿದು ಕೈ ತಪ್ಪಿ ಹಾರಿ ಹೋಯಿತಯ್ಯೊ ೬

ಅಂಗೈಲಾಡುವ ಗಿಳಿ ಮುಂಗೈ ಮೇಲಣ ಗಿಳಿ
ರಂಗ ಪುರಂದರವಿಠಲನ್ನ ಅಂಗಣದೊಳಾಡುವ ಗಿಳಿ ೭

ರಾಗ--ಖರಹರಪ್ರಿಯ ತಾಳ--ಏಕ

ತಿರುಪತಿ ವೆಂಕಟರಮಣ, ನಿನಗೇತಕೆ ಬಾರದು ಕರುಣ ಪ
ನಂಬಿದೆ ನಿನ್ನಯ ಚರಣ, ಪರಿಪಾಲಿಸಬೇಕೊ ಕರುಣ ಅ

ಅಳಗಿರಿಯಿಂದಲಿ ಬಂದಾ ಸ್ವಾಮಿ ಅಂಜನಗಿರಿಯಲಿ ನಿಂದ
ಕೊಳಲೂದೊ ಧ್ವನಿ ಚಂದಾ ನಮ್ಮ ಕುಂಡಲರಾಯ ಮುಕುಂದ ೧

ಬೇಟೆಯಾಡುತ ಬಂದಾ ಸ್ವಾಮಿ ಬೆಟ್ಟದ ಮೇಲೆ ನಿಂದಾ
ನೀಟುಗಾರ ಗೋವಿಂದಾ ಅಲ್ಲಿ ಜೇನು ಸಕ್ಕರೆಯನು ತಿಂದಾ ೨

ಮೂಡಲಗಿರಿಯಲಿ ನಿಂತ ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತಾ ಈ ರೇಳು ಲೋಕಕನಂತ ೩

ಆಡಿವರೆ ಸ್ಥಿರವಪ್ಪ ಅಬದ್ಧಗಳಾಡಲು ಒಪ್ಪ
ಬೇಡಿದ ವರಗಳನಿಪ್ಪ ನಮ್ಮ ಮೂಡಲಗಿರಿ ತಿಮ್ಮಪ್ಪ ೪

ಅಪ್ಪವು ಅತಿರಸ ಮೆದ್ದ ಸ್ವಾಮಿ ಅಸುರರ ಕಾಲಲಿ ಒದ್ದ
ಸತಿಯರ ಕೂಡಾಡುತಲಿದ್ದ ಸ್ವಾಮಿ ಸಕಲ ದುರ್ಜನರನು ಗೆದ್ದ ೫

ಬಗೆಬಗೆ ಭಕ್ಷ್ಯ ಪರಮಾನ್ನ ನಾನಾ ಬಗೆಯ ಸಕಲ ಶಾಲ್ಯಾನ್ನ
ಬಗೆಬಗೆ ಸೊಬಗು ಮೋಹನ್ನ ನಮ್ಮ ನಗೆಮುಖದ ಪ್ರಸನ್ನ ೬

ಕಾಶೀ ರಾಮೇಶ್ವರದಿಂದ ಅಲ್ಲಿ ಕಾಣಿಕೆ ಬರುವುದೆ ಚಂದ
ದಾಸರ ಕೂಡೆ ಗೋವಿಂದ ಅಲ್ಲಿ ದಾರಿ ನಡೆವುದೇ ಚೆಂದ ೭

ಎಲ್ಲ ದೇವರ ಗಂಡ ಅವ ಚೆಲ್ಲರೆ ದೈವರ ಮಿಂಡ
ಬಲ್ಲಿದರಿಗೆ ಉದ್ದಂಡ ಶಿವನ ಬಿಲ್ಲ ಮುರಿದ ಪ್ರಚಂಡ ೮

ಕಾಸು ತಪ್ಪಿದರೆ ಪಟ್ಟಿ ಬಡ್ಡಿ ಕಾಸುಬಿಡದೆ ಗಂಟು ಕಟ್ಟಿ
ದಾಸನೆಂದರೆ ಬಿಡ ಗಟ್ಟಿ ನಮ್ಮ ಕೇಸಕ್ಕಿ ತಿಮ್ಮಪ್ಪಸೆಟ್ಟಿ ೯

ದಾಸರ ಕಂಡರೆ ಪ್ರಾಣ ತಾ ಧರೆಯೊಳಗಧಿಕ ಪ್ರವೀಣ
ದ್ವೇಷಿಯ ಗಂಟಲ ಗಾಣ ನಮ್ಮ ದೇವಗೆ ನಿತ್ಯಕಲ್ಯಾಣ ೧೦

ಮೋಸ ಹೋಗುವನಲ್ಲಯ್ಯ ಒಂದು ಕಾಸಿಗೆ ಒಡ್ಡುವ ಕೈಯ
ಏಸು ಮಹಿಮಗಾರನಯ್ಯ ನಮ್ಮ ವಾಸುದೇವ ತಿಮ್ಮಯ್ಯ ೧೧

ಚಿತ್ತವಧಾನ ಪರಾಕು ನಿನ್ನ ಚಿತ್ತದ ದಯವೊಂದೆ ಸಾಕು
ಸತ್ಯವಾಹಿನಿ ನಿನ್ನ ವಾಕು ನೀನು ಸಕಲ ಜನರಿಗೆ ಬೇಕು ೧೨

ಅಲ್ಲಲ್ಲಿ ಪರಿಷೆಯ ಗುಂಪು ಮತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮತ್ತಲ್ಲಲ್ಲಿ ಪರಿಮಳದಿಂಪು ೧೩

ಅಲ್ಲಲ್ಲಿ ಜನಗಳ ಕೂಟ ಮತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮತ್ತಲ್ಲಿಂದ ಊರಿಗೆ ಓಟ ೧೪

ಪಾಪ ವಿನಾಶಿನಿ ಸ್ನಾನ ಹರಿ ಪಾದೋದಕವೇ ಪಾನ
ಕೋಪತಾಪಗಳ ನಿಧಾನ ನಮ್ಮ ಪುರಂದರವಿಠಲನ ಧ್ಯಾನ ೧೫

---

ರಾಗ--ವಸಂತ ತಾಳ--ಆದಿ

ಕೊಡು ಬೇಗ ದಿವ್ಯಮತಿ ಸರಸ್ವತಿ ಕೊಡು ಬೇಗ ದಿವ್ಯಮತಿ ಪ

ಮೃಡಹರಿಹಯಮುಖರೊಡೆಯಳೆ ನಿನ್ನಯ
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ಅ

ಇಂದಿರಾರಮಣನ ಹಿರಿಯ ಸೊಸೆಯು ನೀನು
ಬಂದೆನ್ನ ವದನದಿ ನಿಂದು ನಾಮವ ನುಡಿಸೆ ೧

ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ
ಸುಖವಿತ್ತು ಪಾಲಿಸೆ ಸುಜನಶಿರೋಮಣಿ ೨

ಪತಿತಪಾವನೆ ನೀ ಗತಿಯೆಂದು ನಂಬಿದೆ
ಸತತ ಪುರಂದರವಿಠಲನ ತೋರೆ ೩

ರಾಗ--ಕಾಂಬೋದಿ ತಾಳ--ಝಂಪೆ

ಏನು ಮರುಳಾದೆಮ್ಮ ಎಲೆ ರುಕ್ಮಿಣಿ ಪ

ಹೀನಕುಗೊಲ್ಲ ಶ್ರೀ ಗೋಪಾಲಕೃಷ್ಣಗೆ ಅ

ಹಾಸಿಕಿಲ್ಲದೆ ಹಾವಿನ ಮೇಲೆ ಒರಗಿದವ
ಹೇಸಿಕಿಲ್ಲದೆ ಕರಡಿಯ ಕೂಡಿದ
ಗ್ರಾಸಕಿಲ್ಲದೆ ತೊತ್ತಿನಮಗನ ಮನೆಲುಂಡ
ದೋಷಕಂಜದೆ ಮಾವನ ಸಿರವ ತರಿದವಗೆ ೧

ಕುಂಡಗೋಳಕರ ಮನೆ ಕುಲದೈವವೆನಿಸಿದಗೆ
ಮಂಡೆ ಬೋಳರ ಮನಕೆ ಮನದೈವವ
ಹಿಂಡು ಗೊಲ್ಲರ ಮನೆ ಹಿರಿಯನೆಂದೆನಿಸುವ
ಭಂಡಾಟದ ಗೊಲ್ಲ ಈ ಬಳಗದೊಳಗೆಲ್ಲ ೨

ಒಬ್ಬರಲ್ಲಿ ಹುಟ್ಟಿ ಒಬ್ಬರಲ್ಲಿ ಬೆಳೆದ
ಒಬ್ಬರಿಗೆ ಮಗನಲ್ಲ ಜಗದೊಳಗೆಲ್ಲ
ಅಬ್ಬರದ ದೈವ ಶ್ರೀ ಪುರಂದರವಿಠ್ಠಲನ
ಉಬ್ಬುಬ್ಬಿ ಮದುವ್ಯಾದೆ ಉತ್ಸಾಹದಿಂದ ೩

ರಾಗ--ಮೋಹನ ತಾಳ--ಆದಿ

ಏನಿತ್ತು ಮೆಚ್ಚಿಸುವೆನೊ ಏನೋ ವಿಠಲ ಪ

ದೀನರಕ್ಷಕನೆ ನಿನ್ನ ಧ್ಯಾನವೀಯೊ ವಿಠಲಯ್ಯ ಅ

ಓದಿ ನಿನ್ನ ಮೆಚ್ಚಿಸುವೆನೆ ವೇದವ ತಂದಜನಿಗಿತ್ತೆ
ವಾದಿಸಿ ನಿನ್ನ ಮೆಚ್ಚಿಸುವೆನೆ ಆದಿಶೇಷಶಯನನೆ ೧

ಆಡಿ ನಿನ್ನ ಮೆಚ್ಚಿಸುವೆನೆ ಮೃಡನಯ್ಯನಯ್ಯನೆ
ಪಾಡಿ ನಿನ್ನ ಮೆಚ್ಚಿಸುವೆನೆ ಪವನಜನ ಸ್ವಾಮಿ ನೀನೆ ೨

ಚೆನ್ನವಿತ್ತು ಮೆಚ್ಚಿಸುವೆನೆ ಸಿರಿದೇವಿಯರಸನೆ
ಪೂರ್ಣಾನಂದ ಸ್ವಾಮಿಯೆ ಪುರಂದರವಿಠಲಯ್ಯ ೩

---

ರಾಗ--ಕಾಂಬೋದಿ ತಾಳ--ಝಂಪೆ

ಆರು ಹಿತವರು ನಿನಗೆ ಮೂರು ಮಂದಿಯೊಳಗೆ ಪ

ನಾರಿಯೋ, ಧಾರುಣಿಯೋ ಬಲು ಧನದ ಸಿರಿಯೋ ಅ

ಅನ್ನರಲಿ ಜನಿಸಿರ್ದ ಅಂಗನೆಯ ಕರೆತಂದು
ತನ್ನ ಮನೆಗವಳ ಯಜಮಾನಿ ಎನಿಸಿ
ಭಿನ್ನವಿಲ್ಲದೆ ಅರ್ಧದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಮ್ಮಳು ಕಾಲವಶದಿ ೧

# KARVETINAGAR
# SRI VENUGOPALASWAMI TEMPLE

### A SYMBOL OF VIBRANT FAITH

*Faith is the source of light*
*Faith is the all-pervading wisdom*
*So declare the sages and saints*

It is the abiding faith of the devout that made the Temple of Sri Venugopalaswami an edifice of everlasting glory.

The Deity - Sri Venugopalaswami - was the patron God of the Karvetinagar rulers whose immeasurable love for the Lord finds its eloquent expression in the hymns composed in a bygone epoch.

Towering above the dusky hills and the green valley below, the temple presents a spectacular view.

The exquisitely carved sculptures, intricately designed pillars and elaborately decorated mandapas are indeed a connoisseur's delight.

The graceful forms of Lord Venugoplaswami and His consorts - Sri Satyabhama and Sri Rukmini captivate our hearts. The Deity -known as bounteous *Kalpavriksha* - bestows His blessings on all those who pray to Him.

The celebrated poet Sarangapani who was the court-poet of the rajas of Karvetinagar, declares unequivocally that the easiest means for salvation in the Kaliyuga is the darsan of Sri Venugopalaswami. It is said Thyagaraja the renowned composer, attained bliss after worshipping Lord Venugopala.

The *darshan* of Sri Venugopalaswami is an exhilarating spiritual experience. The Lord, one of the most delightful manifestations of Sriman Narayana, is a veritable Kalpavriksha.

Karvetinagar is located on Puttur - Chittoor road, about 25 Kilometres away from Tirupati. The Temple is being kept open for worship from early hours of the morning to late hours of the night.

* * *



LORD ON PEDDA SESHAVAHANAM

# TIRUMALA TIRUPATI DEVASTHANAMS
## TIRUPATI

## SRI VENKATESWARA CENTRAL LIBRARY AND RESEARCH CENTRE

### AN APPEAL

Sri Venkateswara Central Library and Research Centre, Tirupati was established by Tirumala Tirupati Devasthanams and was dedicated to the devotees on the auspicious occasion of its Diamond Jubilee Year 1993. The spacious building of Sri Venkateswara Central Library and Research Centre combines the best of our traditional 'Vastu Silpa' and modern architectural style and is a store house of rare collection of books and documents. It is aimed at spreading the noble ideals and tenets enshrined in our great scripturees - the Vedas, the Upanishads, the Ithihasaas, the Puranas, the Sastras and the Bhagavadgita.

Sri Venkateswara Central Library and Research Centre provides a venue for conducting research on the rich cultural heritage of India, its Philosophy, religious music and Indian thought and the various facets of the Sanatana Dharma. It is also our desire to publish the rare and unpublished material relating to Indology and produce authentic papers on original Sanskrit texts and their lucid translations. A well-equipped printing unit is also under proposal. It is our earnest endeavour now to make the Library and the Research Centre a temple of Indian Culture and a premier Institution of Learning and Research. The whole project, however, needs considerable resources for completion.

We, therefore, appeal to the general public, voluntary bodies and Institutions to donate generously to the library in cash or by way of books. Individuals or organisations may also gift their exclusive libraries containing rare books on Indology and Indian Philosophy and enrich S.V.C.L. & R.C.

Please send all your donations either books or cash / by Demand Draft to the Officer on Special Duty, Sri Venkateswara Central Library & Research Centre, Tirupati - 517 502, Andhra Pradesh.

*Vidya adds beauty to the man; it is a hidden treasure; it guarantees fame, prosperity and happiness. Vidya is the Guru of all gurus; it serves as a relative on alien lands. Vidya is the supreme God; Vidya is honoured by the rulers and not wealth; without Vidya, one is a beast.*

---Bhartruhari



**EXECUTIVE OFFICER**

ಮುನ್ನ ಶತಕೋಟಿ ರಾಯರುಗಳಾಳಿದ ನೆಲನ
ತನ್ನದೆಂದೆನುತ ಶಾಸನವ ಬರೆಸಿ
ಬಿನ್ನಣದ ಮನೆಕಟ್ಟಿ ಕೋಟೆ ಕೊತ್ತಳವಿಕ್ಕಿ
ಚೆನ್ನಿಗನು ಅಸುವಳಿಯೆ ಹೊರಗೆ ಹಾಕುವರು ೨

ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ
ಕ್ಷುದ್ರತನ ಕಳವು ಪರದ್ರೋಹದಿಂದ
ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು
ಸದ್ದದಲಿ ಆರುಂಬುವರು ಪೇಳೊ ಮನುಜ ೩

ಶೋಕವನು ಗೈಯುವರು ಸತಿಸುತರು ಬಾಂಧವರು
ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ
ಲೋಕದೊಳು ಗಳಿಸಿರ್ದ ಪುಣ್ಯಪಾಪಗಳೆರಡು
ಸಾಕಾರವಾಗಿ ಸಂಗಡ ಬಾಹೊವಲ್ಲದೆ ೪

ಅಸ್ಥಿರದ ದೇಹವನು ನೆಚ್ಚಿ ನೀ ಕೆಡದೇಡ
ಸ್ವಸ್ಥದಲಿ ನೆನೆ ಕಂಡ್ಯ ಪರಮಾತ್ಮನ
ಚಿತ್ತದೊಳು ಶುದ್ಧಿಯಿಂ ಪುರಂದರವಿಠಲನೆ
ಉತ್ತಮೋತ್ತಮನೆಂದು ಸುಖಿಯಾಗೊ ಮನುಜ ೫

---

ರಾಗ--ಮೋಹನ ತಾಳ--ಅಟ್ಟ

ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ ಪ

ವಿಚಾರವಿಲ್ಲದೆ ಪರರ ದೂಷಿಪುದಕ್ಕೆ ಚಾಚಿಕೊಂಡಿರುವಂಥ ನಾಲಿಗೆ ಅ

ಪ್ರಾತಃಕಾಲದೊಳೆದ್ದು ನಾಲಿಗೆ ಸಿರಿಪತಿಯೆನ್ನಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿಪತಿ ಜನಕನ ಸತತವು ನುಡಿ ಕಂಡ್ಯ ನಾಲಿಗೆ ೧

ಚಾಡಿ ಹೇಳಲಿದೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀ ರಾಮನ ನಾಮವ ಪಾಡುತಲಿರು ಕಂಡ್ಯ ನಾಲಿಗೆ ೨

ಹರಿಯ ಸ್ಮರಣೆ ಮಾಡು ನಾಲಿಗೆ ನರಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಠ್ಠಲರಾಯನ ಚರಣಕಮಲವ ನೆನೆ ನಾಲಿಗೆ ೩

ರಾಗ--ಕಾಂಬೋದಿ ತಾಳ--ಚಾಪು

ಕೆಟ್ಟು ನೆಂಟರ ಸೇರುವುದು ಬಲು ಕಠಿಣ ಪ

ಇನ್ನು ಹುಟ್ಟೇಳು ಜನ್ಮಕ್ಕೆ ಇದು ಬೇಡ ಹರಿಯೆ ಅ

ವಿಷವ ಕುಡಿಯಲಿಬಹುದು ಎಸೆದ ಶೂಲದ ಮುಂದೆ
ಒಸಗಿ ಬಹು ವೇಗದಿ ಹಾಯಬಹುದು
ವಿಷಯ ಕುಂಡದ ಒಳಗೆ ಮುಳುಗಿಕೊಂಡಿರಬಹುದು
ಎಸೆವ ಅಂಬಿಗೆ ಎದೆಯ ಗುರಿಮಾಡಬಹುದು ೧

ಶರಧಿ ಧುಮುಕಲಿಬಹುದು ಉರಗನಪ್ಪಲುಬಹುದು
ಊರ ಮಾರಿಗೆ ಗ್ರಾಸವಾಗಲಿಬಹುದು
ಪುರುಷ ಮೃಗ ಮೇಲ್ವಾಯ್ದು ಬರೆ ಶಿರವ ಕೊಡಬಹುದು
ಗರಗಸದಲಿ ಕೊರಳ ಕೊಯಿಸಿಕೊಳಬಹುದು ೨



ಕುಡಗೋಲು ಪಿಡಿದು ಕೂಲಿಯ ಮಾಡಿ ಉಣಬಹುದು
ಒಡಲಿಗಾಗಿ ಹುಡಿಯ ಮುಕ್ಕಬಹುದು
ಪೊಡವಿಯೊಳು ಪುರಂದರವಿಠ್ಠಲರಾಯನ
ಕಡು ಹರುಷದಿ ಭಜಿಸಿ ಸುಖಿಯಾಗಬಹುದು ೩

---

ರಾಗ--ಸಹಾನ ತಾಳ--ಅಟ್ಟ

ಏನು ಮಾಡಲೊ ಮಗನೆ ಯಾಕೆ ಬೆಳಗಾಯಿತೊ
ಏನು ಮಾಡಲೊ ಕೃಷ್ಣಯ್ಯ ಪ

ಏನು ಮಾಡಲಿ ಇನ್ನು ಮಾನಿನಿಯರು ಎನ್ನ
ಮಾನವ ಕಳೆಯುವರೊ ರಂಗಯ್ಯ ಅ

ಹಾಲು ಮೊಸರು ಬೆಣ್ಣೆ ಕದ್ದನೆಂಬುವರೊ
ಮೇಲಿನ ಕೆನೆಗಳ ಮೆದ್ದನೆಂಬುವರೊ
ಬಾಲಕರೆಲ್ಲರ ಬಡಿದನೆಂಬರೊ ಎಂಥ
ಕಾಳ ಹೆಂಗಸು ಇವನ ಹಡೆದಳೆಂಬುವರೊ ೧

ಕಟ್ಟಿದ್ದ ಕರುಗಳ ಬಿಟ್ಟನೆಂತೆಂಬರೊ
ಮೆಟ್ಟಿ ಸರ್ಪನ ಮೇಲೆ ಕುಣಿದನೆಂಬುವರೊ
ಪುಟ್ಟ ಬಾಲೆಯರ ಮೋಹಿಸಿದನೆಂಬರೊ ಎಂಥ
ದುಷ್ಟ ಹೆಂಗಸು ಇವನ ಹಡೆದಳೆಂಬುವರೊ ೨

ಗಂಗಾಜನಕ ನಿನ್ನ ಜಾರನೆಂತೆಂಬರೊ
ಶೃಂಗಾರಮುಖ ನಿನ್ನ ಬರಿದೆ ದೂರುವರೊ
ಮಂಗಳಮಹಿಮ ಶ್ರೀ ಪುರಂದರವಿಠ್ಠಲ
ಹಿಂಗದೆ ಎಮ್ಮನು ಸಲಹೆಂತೆಂಬರೊ ೩

* * * * * * * *

# ತಿರುಮಲೆಯಲ್ಲಿ ವಸತಿ

* ತಿರುಮಲೆಯಲ್ಲಿ ಯಾತ್ರಿಕರಿಗಾಗಿ ಉಚಿತವಾಗಿ ಸತ್ರಗಳಲ್ಲಿ ವಸತಿಯುಂಟು. ಇಲ್ಲಿನ ಕೋಣೆಗಳಲ್ಲಿ ವಿದ್ಯುತ್, ನೀರು ಸಹ ಉಚಿತವೇ. ಆದರೆ ಇವುಗಳಲ್ಲಿ ಮಂಚ, ಹಾಸಿಗೆ ಮುಂತಾದ ಅನುಕೂಲಗಳು ಇಲ್ಲ. ಇವುಗಳಲ್ಲಿ ವಸತಿ ಬೇಕಾದವರು ತಿರುಮಲೆಯ ಬಸ್ ನಿಲ್ಲುವ ಸ್ಥಳದ ಕೇಂದ್ರ ವಿಚಾರಣಾ ಕಚೇರಿಯಲ್ಲಿ ಕೇಳಿ ಪಡೆಯಬಹುದು.

* ಮಂಚ ಹಾಸಿಗೆ ಮತ್ತಿತರ ಸೌಕರ್ಯಗಳಿರುವ ಕೋಣೆಗಳು ಪಡೆಯಲು ತಿರುಮಲೆಯ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ ಅವರನ್ನು ವಿಚಾರಿಸಬೇಕು. ಅಥವಾ ಕನಿಷ್ಠ 30 ದಿನಗಳ ಮುಂಚೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ರೂ. 100-00 ಗಳ ಡಿ. ಡಿ.ಯನ್ನು ತೆಗೆದುಕೊಂಡು, ತಮಗೆ ವಸತಿ ಬೇಕಾದ ದಿನಾಂಕ, ತಿರುಮಲೆಗೆ ಎಷ್ಟು ಮಂದಿ ಬರುತ್ತಿರುವಿರಿ ಎಂಬ ವಿವರಗಳೊಡನೆ ಡಿ. ಡಿ.ಯನ್ನೂ, ವಿವರ ಪತ್ರವನ್ನೂ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್-1) ತಿರುಮಲೆ 517 504 ಇವರಿಗೆ ಕಳುಹಿಸಬೇಕು.

## ಬಾಡಿಗೆ (ಸೇವಾಶುಲ್ಕ) ಸಹಿತ ಕೋಣೆಗಳ ವಿವರ ಹೀಗಿದೆ.

| | ದಿನಕ್ಕೆ ಬಾಡಿಗೆ |
|---|---|
| 1. ಹಿಲ್‌ವ್ಯೂ (ಅರ್ಧಕಾಟೇಜು) ಶಂಕುಮಿಟ್ಟ | |
| ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ | ರೂ. 15/- |
| ಎಚ್.ವಿ.ಡಿ.ಸಿ. ಪ್ರತಿಕಾಟೇಜು (ಗೀಜರ್‌ನೊಂದಿಗೆ) | ರೂ. 50/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ದೊಡ್ಡವು | ರೂ. 30/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ಚಿಕ್ಕವು | ರೂ. 25/- |
| (ಮೊದಲೇ ರಿಸರ್ವ್ ಮಾಡಿಸಬಹುದು) | |
| 2. ಮಂಗಳಬಾವಿ ಕಾಟೇಜುಗಳು ಟಿ.ಬಿ.ಸಿ. 3 ಸಾಲು ಹಿಂಬಾಗ | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ A, B. (ಪ್ರತಿಯೊಂದು) | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ C, D. (ಪ್ರತಿಯೊಂದು) | ರೂ. 60/- |
| ವಿ. ವಿ. ಸಿ. | ರೂ. 150/- |
| ಎಂ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 50/- |
| ಟಿ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. ಸೂಟ್‌ಗಳು | ರೂ. 15/- |
| 3. ಎಸ್.ವಿ.ಅತಿಥಿಗೃಹ, ಎಸ್.ವಿ.ಜಿ.ಎಚ್.-ಪ್ರತಿಸೂಟ್ | ರೂ. 100/- |
| ಆರ್. ಬಿ. ಜಿ. ಎಚ್; ಎನ್. ಎನ್. ಜಿ. ಎಚ್. -- | ರೂ. 100/- |
| ಮೂಲೆ ಕೋಣೆಗಳು -- | ರೂ. 150/- |
| (ರಿಸರ್ವೇಷನ್ ಪದ್ಧತಿಯಿಲ್ಲ) | |
| 4. ಟ್ರಾವೆಲರ್ಸ್ ಬಂಗ್ಲೆ (ಒಳಗಿನ ಕಾಟೇಜು) | ರೂ. 150/- |
| ನಾರಾಯಣಗಿರಿ ಕಾಟೇಜುಗಳು | ರೂ. 350/- |
| ಎನ್.ಜಿ.ಸಿ. -- 5, 12,13, | ರೂ. 500/- |
| ಎಚ್. ಆರ್. ಜಿ. ಕಾಟೇಜು ಪ್ರತಿಭಾಗ -- ಎ.ಸಿ. | ರೂ. 400/- |
| 5. ಮೋದಿಭವನ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀ ನಿಕೇತನ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಇಂದಿರಾ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಬಾಲಕುಟೀರ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀನಿವಾಸ ನಿಲಯ, ಪ್ರತಿಸೂಟ್ -- ಎ.ಸಿ. | ರೂ. 500/- |
| ಶ್ರೀಲಕ್ಷ್ಮಿನಿಲಯಂ, ಪ್ರತಿಸೂಟ್ -- ಎ.ಸಿ. | ರೂ. 500/- |
| ಗೋದಾವರಿಸದನ್, ಪ್ರತಿಸೂಟ್ -- ಎ.ಸಿ. | ರೂ. 500/- |
| ಗಾಂಬಲ್ ಅತಿಥಿಗೃಹ | ರೂ. 250/- |
| ಪದ್ಮಾವತೀ ಅತಿಥಿಗೃಹ (ಮಾಸ್ಟರ್‌ಸೂಟ್) | ರೂ. 1500/- |
| ಪದ್ಮಾವತೀ ಅತಿಥಿಗೃಹ ಇತರ -- ಪ್ರತಿಸೂಟ್ | ರೂ. 500/- |
| ವಿದ್ಯಾಸದನ್ ಮಾಸ್ಟರ್ ಸೂಟ್ | ರೂ. 1500/- |
| ವಿದ್ಯಾಸದನ್ ಇತರ -- ಪ್ರತಿಸೂಟ್ | ರೂ. 500/- |
| ಗೋಕುಲಂ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 1000/- |
| ರಿಸರ್ವೇಷನ್ ಇಲ್ಲ. ಅವಕಾಶವಿದ್ದಂತೆ ನೀಡಲಾಗುವುದು. | |
| 6. ಮದುವೆ ಮಂಟಪಗಳು -- ಬೆಳಗ್ಗೆ 8 ರಿಂದ 24 ಗಂಟೆ. | |
| ಶಂಕುಮಿಟ್ಟ ಕಾಟೇಜುಗಳು -- 272, 260, 266, 267, | ರೂ. 100/- |
| ಟಿ. ಬಿ. ಕಾಟೇಜುಗಳು 71, ಮೂರನೇಸಾಲು 136, 152 | ರೂ. 100/- |
| ರೂಯಾಕಾಟೇಜು, ಗೋಗಿನೇನಿ ಕಾಟೇಜು, ಎ.ಟಿ.ಸಿ. 99 | ರೂ. 100/- |
| ಚಿದಂಬರಂ ಚೆಟ್ಟಿಯಾರ್ ಕಾಟೇಜು | ರೂ. 100/- |
| ಶ್ರೀ ಸೀತಾರಾಮ ಕಲ್ಯಾಣ ಮಂಟಪ | ರೂ. 1000/- |

* ದಿನವೆಂದರೆ ವಸತಿ ನೀಡಿದ ಹೊತ್ತಿನಿಂದ 24 ಗಂಟೆಗಳು.
* ಕೇಳಿದ ವಸತಿ ಇಲ್ಲದಿದ್ದಲ್ಲಿ ಬೇರೆ ವಸತಿ ನೀಡಿ, ಹೆಚ್ಚಿನ ಹಣವನ್ನು (ಇದ್ದರೆ) ಹಿಂದಿರುಗಿಸಲಾಗುತ್ತದೆ.
* ಒಂದು ದಿನಕ್ಕೆ ಮಾತ್ರವೇ ರಿಸರ್ವೇಷನ್. ಅಂದು ಬರದಿದ್ದಲ್ಲಿ ಮಾಸಲಾತಿ ರದ್ದಾಗಿ, ಹಣವನ್ನು ಹಿಂದಿರುಗಿಸುವುದೂ ಮತ್ತೊಂದು ದಿನಕ್ಕೆ ಹೊಂದಿಸುವುದೂ ಇಲ್ಲ.
* ಅವಧಿ ಮೀರಿದ ಮೇಲೂ ವಸತಿಯಲ್ಲಿಯೇ ಇದ್ದಲ್ಲಿ ಮೂರು ಪಾಲು ಹೆಚ್ಚಿನ ಹಣದ ದಂಡ ವಸೂಲು ಮಾಡಲಾಗುವುದು.
* ಇಲ್ಲಿ ಸೂಚಿಸಲಾಗಿರುವ ಸೇವಾಶುಲ್ಕಗಳು ಬದಲಾವಣೆ ಆಗಬಹುದು.

## ತಿರುಪತಿಯಲ್ಲಿ ವಸತಿ

| | | |
|---|---|---|
| 1. ಎಸ್. ವಿ. ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | | ರೂ. 100/- |
| 2. ಅಲಿಪಿರಿ ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | | ರೂ. 75/- |
| 3. ಮೊದಲ ಹೊಸಸತ್ರ --ಸಿಂಗಲ್ ರೂಂ -- | | ರೂ. 50/- |
| | ಡಬಲ್ ರೂಂ -- | ರೂ. 100/- |
| | 4 ಹಾಸಿಗೆಯ ರೂಂ -- | ರೂ. 100/- |
| 4. ಪದ್ಮಾವತೀ ಅತಿಥಿಗೃಹ (ಎ.ಸಿ.) | | |
| ಸಿಂಗಲ್ ರೂಂ -- 9, 10, | | ರೂ. 100/- |
| ಎರಡು ಹಾಸಿಗೆಯದು | | ರೂ. 150/- |
| ಎರಡು ಹಾಸಿಗೆ -- ಮೊಸಾಯಿಕ್ ರೂಂ (11,12,15,17) | | ರೂ. 200/- |
| ಎರಡು ಹಾಸಿಗೆ ಸೂಪರ್ ಮೊಸಾಯಿಕ್ ರೂಂ 16,18, | | ರೂ. 250/- |

ಈ ದರಗಳು ಈಗ ಜಾರಿಯಲ್ಲಿವೆ.

# ಪಾಂಚರಾತ್ರಾಗಮ

---ಕಂದಾಡೈ ಕೇಶವನ್.

ಸೃಷ್ಟಿಯ ಪೂರ್ವದಲ್ಲಿ ಸಮಗ್ರವಾದ ಪಾಂಚರಾತ್ರ ಶಾಸ್ತ್ರವನ್ನು ತಿಳಿದಿದ್ದವನು ಸಾಕ್ಷಾತ್ ನಾರಾಯಣನೊಬ್ಬನೇ ಎಂಬುವುದು ಸಿದ್ಧಾಂತ. ವೇದ ಉಪನಿಷತ್ ಸಾಂಖ್ಯಯೋಗ ಮುಂತಾದುವುಗಳು ಜನ ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗದಿರುವ ಸಮಯದಲ್ಲಿ ಲೋಕಹಿತಕ್ಕಾಗಿ ತನ್ನ ಭಕ್ತರ ಅಭೀಷ್ಟದಂತೆ ಶ್ರೀಮನ್ನಾರಾಯಣನು ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ ಮತ್ತು ಇಂದ್ರ --ಈ ಐವರಿಗೆ ಐದು ರಾತ್ರಿಗಳಲ್ಲಿ ಪಾಂಚರಾತ್ರವೆಂಬ ಮೋಕ್ಷಧರ್ಮಶಾಸ್ತ್ರವನ್ನು ಕ್ರಮವಾಗಿ ಉಪದೇಶಿಸಿದನು. ಈ ಐದು ಜನ ಮತ್ತೆ ತಮ್ಮ ಆಪ್ತ ಶಿಷ್ಯರಿಗೆ ಈ ಪಾಂಚರಾತ್ರ ಶಾಸ್ತ್ರವನ್ನು ಉಪದೇಶಮಾಡಿದರು. ಜಗತ್ ಕಲ್ಯಾಣಕ್ಕಾಗಿ ಅವತರಿಸಿದ ಈ ಮಹಾಶಾಸ್ತ್ರವು ಎಲ್ಲರಿಗೂ ಆದರಣೀಯವಾಗಿ, ಉಪದೇಶಕ್ಕೆ ಯೋಗ್ಯವಾಗಿ ಪರಮ ಆನಂದವನ್ನು ಕೊಡುವ ಅಮೃತವಾಹಿನಿಯಾಗಿ ಅಂದಿನಿಂದ ಇಂದಿನವರೆಗೂ ಭುವಿಯಲ್ಲಿ ಪ್ರಚಾರವಾಗಿ ಮೆರೆಯುತ್ತಿದೆ. ಮಹಾಭಾರತದ ಶಾಂತಿಪರ್ವದಲ್ಲಿ ಭೀಷ್ಮಾಚಾರ್ಯರು ಯುಧಿಷ್ಠಿರನಿಗೆ ಈ ಪಾಂಚರಾತ್ರಶಾಸ್ತ್ರವನ್ನು ಉಪದೇಶ ಮಾಡಿದ ಮೇಲೆ ಇದರ ಹಿರಿಮೆ, ಶ್ರೇಷ್ಠತ್ವ ಇನ್ನೂ ಪ್ರಕಾಶವಾಯಿತು.

## ಪಾಂಚರಾತ್ರ ಶಬ್ದಾರ್ಥ

೧. ಕಪಿಂಜಲ ಸಂಹಿತೆಯಲ್ಲಿ ಕಾಶ್ಯಪ ಋಷಿಯ ಪ್ರಶ್ನೆಗೆ ಕಪಿಂಜಲ ಋಷಿಯು :--

ಅಥ ವಕ್ಷ್ಯಾಮಿ ವಿಪ್ರೇಂದ್ರ
ಪಂಚರಾತ್ರಾರ್ಥ ಮುತ್ತಮಂ
ಪೃಥಿವ್ಯಾದೀನಿ ಭೂತಾನಿ
ಗುಣಾಃ ಪಂಚ ಮಹಾ ಮತೇ
ರಾತ್ರಯೋ ಜಂತವಃ ಪ್ರೋಕ್ತಾಃ
ಸರ್ವಶಾಸ್ತ್ರೇಷು ನಿಶ್ಚಿತಾ
ತದ್ ಭೋಗಾದ್ವಿನಿವೃತ್ತಿಸ್ತು
ಪಾಂಚರಾತ್ರಮಿತಿ ಸ್ಮೃತಂ

ಈ ಪಾಂಚರಾತ್ರ ಶಾಸ್ತ್ರವು ಪಂಚಭೂತಗಳ ಗುಣಸ್ವರೂಪವನ್ನು ಸರ್ವಶಾಸ್ತ್ರಗಳ ಸಾರವಾಗಿ ಭೋಗದಿಂದ ನಿವೃತ್ತಿ ಹೊಂದಿ ಮೋಕ್ಷವನ್ನು ಹೊಂದುವಂತಹ ಶಾಸ್ತ್ರವಾಗಿದೆ ಎನ್ನುವರು.

೨. ಪಾದ್ಮ ಸಂಹಿತೆಯಲ್ಲಿ ಭಗವಾನ್ ನಾರಾಯಣನು ಕಪಿಲಮುನಿಗೆ ಪಾಂಚರಾತ್ರ ಮಹಿಮೆಯನ್ನು ಹೇಳುವಾಗ ತನ್ನ ಹಲವು ಅವತಾರಗಳಲ್ಲಿ ಶಾಸ್ತ್ರಗಳನ್ನು ಭೂಲೋಕದ ಜನರ ಹಿತಕ್ಕಾಗಿ ನೀಡಿದಾಗ ಅವು ಸುಲಭವಾಗಿ ಅರ್ಥವಾಗುತ್ತಿರಲಿಲ್ಲ, ಆದ್ದರಿಂದ--

ಅಲ್ಪಾಯಾಸೇನ ಸುಲಭಂ
ಭೂಯಿಷ್ಠಂ ಫಲ ಮದ್ಭುತಂ
............................ಪಂಚರಾತ್ರಾಭಿದಂ
ಶಾಸ್ತ್ರಂ ಮಯಾ ಪೂರ್ವಂ ಕೃತಂ ಕಿಲ

ಎಂಬುವುದಾಗಿ ಸುಲಭ ಗ್ರಾಹ್ಯವಾದ ಸುಲಭೋಪಾಯವಾದ ಪಾಂಚರಾತ್ರವನ್ನು ಉಪದೇಶಮಾಡುತ್ತೇನೆ ಎಂಬುವುದಾಗಿ ತಿಳಿಸಿರುತ್ತಾನೆ.

೩. ನಾರದ ಪಾಂಚರಾತ್ರದಲ್ಲಿ (ಇದನ್ನು ಭಾರದ್ವಾಜಸಂಹಿತೆ ಎಂಬುವುದಾಗಿ ಕರೆಯುತ್ತಾರೆ.) ಅಲ್ಲಿ ಭಗವಾನ್ ಭಾರದ್ವಾಜ ಮುನಿಗಳು--

ಪಾಂಚರಾತ್ರಂ ಮಹಾದಿವ್ಯಂ
ಶಾಸ್ತ್ರಂ ಶ್ರುತಿವಿಭಾವನಮ್
ವಿಶೇಷೇಣ ಅಧಿಗಂತವ್ಯಂ
ಗೀತಂ ಭಗವತಾ ಸ್ವಯಂ
ವೇದವೇದ್ಯಃ ಸ ಭಗವಾನ್
ಕೃಪಯಾ ಪರಯಾಚ್ಯುತಃ
ಚತುರ್ವಿಧಮಿದಂ ಪ್ರಾಹ
ಸರ್ವೇಷಾಂ ಹಿತಕಾರಣಾತ್
ಪರಸ್ಯ ಬ್ರಹ್ಮಣಸ್ತಸ್ಯ
ವಿದ್ಯಾವ್ಯೂಹಾದಿ ಸಂಸ್ಥಿತಿಃ
ಜ್ಞಾನಂ ಕ್ರಿಯಾಃ ಸಮಸ್ತಾಶ್ಚ
ಯೋಗಂ ಚಾತ್ರ ಫಲಾನಿ ಚ

--ಪಂಚರಾತ್ರವೆಂಬ ಶ್ರುತಿಗಳ ಸಾರವಾದ ಮಹಾಶಾಸ್ತ್ರವನ್ನು ಭಗವಂತನಾದ ಕೇಶವನು ಸ್ವತಃ ತಾನೇ ಉಪದೇಶಮಾಡಿದನು. ಇದು ೧೦೮ ಸಂಹಿತೆಗಳಾಗಿವೆ. ಲೋಕದ ಜನರ ಹಿತಕ್ಕಾಗಿ ಆ ಭಗವಂತನು ಹೇಳಿದ ಈ ಪಂಚರಾತ್ರವು ಆಗಮ ಸಿದ್ಧಾಂತ, ಮಂತ್ರ ಸಿದ್ಧಾಂತ, ತಂತ್ರ ಸಿದ್ಧಾಂತ, ತಂತ್ರಾಂತರ ಸಿದ್ಧಾಂತ ಎಂಬುದಾಗಿ ಚತುರ್ವಿಧವಾಗಿ, ಸ್ವಾಮಿಯ ಪರವ್ಯೂಹಾದಿ ಜ್ಞಾನ ಸ್ವರೂಪವನ್ನು ಸಮಸ್ತಕ್ರಿಯೆಗಳ ಕರ್ಷಣಾದಿ ಪ್ರತಿಷ್ಠೆಗಳನ್ನೂ ಉತ್ಸವಗಳನ್ನೂ, ಪ್ರಾಯಶ್ಚಿತ್ತಗಳನ್ನು ಸರ್ವಯೋಗ ಸ್ವರೂಪಗಳನ್ನು ಇವುಗಳ ಫಲಗಳನ್ನು ಹೇಳುವ ಮಹಾ ವೇದಶಾಸ್ತ್ರವಾಗಿದೆ.

೪. ಶ್ರೀವಿಷ್ಣು ತಿಲಕದಲ್ಲಿ ಬೃಹಸ್ಪತಿ, ಸುರಾಧೀಶ, ವ್ಯಾಸ, ಗೌತಮ, ಕೌಶಿಕ, ವಶಿಷ್ಠ, ಕಣ್ವ, ಚ್ಯವನ, ಶಾಂಡಿಲ್ಯ, ಭೃಗುನಂದನ, ಭಾರದ್ವಾಜ, ಅತ್ರಿ, ಜಾಬಾಲಿ, ಭರತ, ಅಗಸ್ತ್ಯ, ಶೌನಕ -- ಮುಂತಾದ ಮಹರ್ಷಿಗಳಿಗೆ ಬ್ರಹ್ಮನು ತನಗೆ ಭಗವಾನ್ ವಿಷ್ಣುವು ಉಪದೇಶಮಾಡಿದ ಪಂಚರಾತ್ರ ಶಾಸ್ತ್ರವನ್ನು ಹೇಳುವ ಸಮಯದಲ್ಲಿ ಆ ಶಾಸ್ತ್ರದ ಬಗ್ಗೆ--

ಶಾಂಡಿಲ್ಯ ಯೋಗಿನಾಂ ಶ್ರೇಷ್ಠ
ಪಂಚರಾತ್ರ ಕೃತಶ್ರಮ
ವಕ್ಷ್ಯೇತತ್ ಪಂಚರಾತ್ರಾಖ್ಯಂ
ಯನ್ಮಾಂ ತ್ವಂ ಪರಿಪೃಚ್ಛಸಿ
ಸಾರ್ಧಕೋಟಿ ಪ್ರಮಾಣಾನಿ
ಪಂಚರಾತ್ರ ವಚಾಂಶತಿ
ಅಧೀತ್ಯ ತನ್ಮಯೋ ಭೂತ್ವಾ
ಭಗವಂತಂ ಸಮರ್ಚಯನ್
ಆನಂದ ಮನುಭೂಯಾಹಂ
ಋಷಿಭ್ಯ ಉಪದಿಷ್ಟವಾನ್

ಈ ಶಾಸ್ತ್ರವು ಕೋಟಿ ಪ್ರಮಾಣಗಳ ಶಾಸ್ತ್ರ, ಎಲ್ಲಾ ಶಾಸ್ತ್ರಗಳ ಸಾರವಾದ್ದರಿಂದ ಭಗವಂತನನ್ನು ಇದರ ಮೂಲಕ ಅರ್ಚಿಸಬೇಕು. ಇದು ಮೋಕ್ಷಶಾಸ್ತ್ರ. ಪಂಚ ಸಂಸ್ಕಾರಕ್ಕೆ ಎಲ್ಲಾ ಜೀವಿಗಳು ಅಧಿಕಾರಿಗಳೇ. ಜೀವ, ಜಗತ್, ಬ್ರಹ್ಮ ಗುಣ ಚತುಷ್ಟಯಗಳು, ಭಗವದ್ಧ್ಯಾನ ವಿಚಾರಗಳು. ಈ ಶಾಸ್ತ್ರದಲ್ಲಿ ಹೇಳಿವೆ. ಯಾಮುನ ಮುನಿಗಳು ತಮ್ಮ ಆಗಮ ಪ್ರಾಮಾಣ್ಯದಲ್ಲಿ ಇದರ ಮಹತ್ವವನ್ನು ತಿಳಿಸುವಾಗ "ಸತ್ಯಪಿ ಪಂಚರಾತ್ರ ತಂತ್ರಾಣಾಂ ಸ್ವತಃ ಪ್ರಾಮಣ್ಯೋ -- ಎಂಬುವುದಾಗಿ ಹೇಳಿದ್ದಾರೆ.

೫. ಮಹಾಭಾರತದ ಶಾಂತಿಪರ್ವದಲ್ಲಿ ಭೀಷ್ಮರು ಉಪದೇಶಮಾಡುವಾಗ "ಉಮಾಪತಿಯಾದ ಪರಮಶಿವನು ಪಾಶುಪತ ಶಾಸ್ತ್ರವನ್ನು ಸಾಕ್ಷಾತ್ ನಾರಾಯಣನು ಪಾಂಚರಾತ್ರ ಶಾಸ್ತ್ರವನ್ನು ಉಪದೇಶಮಾಡಿದರು-- ಎಲ್ಲಾ ಶಾಸ್ತ್ರಗಳ ವೇದಗಳ ಸಾರ ಈ ಶಾಸ್ತ್ರಗಳು. ಪಾಂಚರಾತ್ರಾಗಮವನ್ನು ತಿಳಿದು ಹರಿಯನ್ನು ಪೂಜಿಸುವವನು ಭಗವಂತನ ಸಾನ್ನಿಧ್ಯವನ್ನು ಹೊಂದುತ್ತಾನೆ" ಎಂಬುವುದಾಗಿ ಹೇಳಿದ್ದಾರೆ.

ಪಾಂಚರಾತ್ರವಿದೋ ಯೇತು
ಯಥಾಕ್ರಮ ಪರಾನ್ನಪ
ಏಕಾಂತ ಭಾವೋಪಗತಾಸ್ತೇ
ಹರಿಂ ಪ್ರವಿಶಂತಿ ವೈ

ಲೋಕದ ಎಲ್ಲಾ ಶುಭಾಶುಭ ಕರ್ಮಗಳು ನಾರಾಯಣನ ಸಂಕಲ್ಪದಿಂದ ನಡೆಯುತ್ತೆ. ವಿಶ್ವವೆಲ್ಲವೂ ನಾರಾಯಣನ ಸ್ವರೂಪ. ನಾರಾಯಣೋ ವಿಶ್ವಮಿದಂ ಪುರಾಣಮ್ --ಇದು ಭೀಷ್ಮರ ಮತ. ಆಗಮಗಳಲ್ಲಿ ಪಾಂಚರಾತ್ರದಂತೆ ವೈಖಾನಸಾಗಮ ಹಾಗೂ ಶೈವಾಗಮಗಳೂ ಕೂಡ ರೂಢಿಯಲ್ಲಿವೆ. ಭಗವಾನ್ ನಾರಾಯಣನು ಬ್ರಹ್ಮನಿಗೆ ಒಂದೂವರೆ ಕೋಟಿ ಶ್ಲೋಕಗಳ ಪಾಂಚರಾತ್ರ ಶಾಸ್ತ್ರವನ್ನು ಉಪದೇಶಮಾಡಿದನೆಂದು ಹೇಳಿದೆ. ಈಗ ೨೧೫ ಪಾಂಚರಾತ್ರ ಗ್ರಂಥಗಳು ಪ್ರಕಟವಾಗಿವೆ. ತಿರುಮಲೆ ತಿರುಪತಿ ದೇವಸ್ಥಾನದವರು ಪ್ರಕಟಿಸಿದ ವೈಖಾನಸಾಗಮ, ಅತ್ರಿ ಸಂಹಿತೆ, ಮರೀಚ ಸಂಹಿತೆ, ಭೃಗು ಸಂಹಿತೆ, ಮಾರ್ಕಾಂಡೇಯ ಸಂಹಿತೆ, ಪಾಂಚರಾತ್ರಾಗಮ, ಆಗಮ ಪುರಾಣಗಳಲ್ಲಿ ಪ್ರಮುಖ. ಕೇಂದ್ರಿಯ ವಿದ್ಯಾಪೀಠ ತಿರುಪತಿ ಪ್ರಕಟಿಸಿರುವ ನಾರದೀಯ ಸಂಹಿತೆ, ವಿಷ್ವಕ್ಸೇನ ಸಂಹಿತೆ, ವಿಶ್ವಾಮಿತ್ರ ಸಂಹಿತೆ ಉಪಯುಕ್ತವಾದ ಪ್ರಮುಖ ಆಗಮ ಗ್ರಂಥಗಳು. ಈ ಆಗಮಶಾಸ್ತ್ರಗಳ ವಿಷಯ ನಿರೂಪಣೆಗಳು ಒಂದೊಕ್ಕೊಂದು ಭಿನ್ನ. ಶ್ರೀ ಯದುಗಿರಿ ಯತಿರಾಜಮಠದ ಯತಿರಾಜ ಸಂಪತ್ಕುಮಾರ ರಾಮಾನುಜ ಮುನಿಗಳಿಂದ ಸಂಶೋಧಿತವಾಗಿ ಪ್ರಕಟನೆಯಾಗಿರುವ ಪಾದ್ಮಸಂಹಿತ ಪ್ರಥಮ ಸಂಪುಟದಲ್ಲಿ ಜ್ಞಾನಪಾದ, ಯೋಗಪಾದ, ಕ್ರಿಯಾಪಾದ, ಪಾದಾತ್ಮಕಃ --ಎಂಬುವುದಾಗಿ ಅಧ್ಯಾಯಗಳಿವೆ. ಇಲ್ಲಿ ಸೃಷ್ಟಿವಿಚಾರ, ಭಗವಂತನ ಅವತಾರ ವಿಶೇಷಗಳು, ಪ್ರಕೃತಿ ಪುರುಷರ ಲಕ್ಷಣ, ಮೋಕ್ಷವಿಚಾರ-- ಜ್ಞಾನ ಪಾದವಲ್ಲೂ, ಯೋಗಪಾದದಲ್ಲಿ ವಿಧವಿಧವಾದ ಯೋಗಾಂಗ, ಆಸನ, ನಾಡಿಶುದ್ಧಿ, ಪ್ರಾಣಾಯಾಮವಿಧಿ, ಲಕ್ಷಣ, ಫಲ, ಧ್ಯಾನಲಕ್ಷಣ, ಫಲ, ಪ್ರಕಾರ, ಸಮಾಧಿ -- ಮುಂತಾದ ವಿಚಾರಗಳು, ಕ್ರಿಯಾಪಾದದಲ್ಲಿ ಭಗವಂತನ ಮೂರ್ತಿ ಯಜನ, ಯಜಮಾನ ಸ್ವರೂಪ, ಭೂಪರೀಕ್ಷಾ, ಬಲಿ ಪ್ರದಾನ, ವಾಸ್ತು ಕಲ್ಪನ, ಮೂರ್ತಿಸ್ಥಾಪನ, ಮಂದಿರ ನಿರ್ಮಾಣ, ಪುಣ್ಯಾಹ ಹೋಮಕುಂಭಸ್ಥಾಪನ, ವಿಘ್ನನಿವಾರಣ, ಭಗವತ್ ಪ್ರಾರ್ಥನಾ, ಶಂಕುಸ್ಥಾಪನ, ಶಾಂತಿಹೋಮ. ಗರ್ಭನ್ಯಾಸವಿಧಿ, ಕಲಶ ಪ್ರತಿಷ್ಠಾ ಮತ್ಸ್ಯಾದಿ ಮೂರ್ತಿ ನಿರೂಪಣೆ, ಪರಿವಾರ ದೇವತೆಗಳ ನಿರೂಪಣೆ, ಪ್ರತಿಷ್ಠೆಗೆ ಉಪಕರಣಗಳು, ವಿಧಿ, ಧ್ಯಾನ, ನ್ಯಾಸ ಪ್ರಕಾರಗಳು. ಪಾದ್ಮಸಂಹಿತೆಯ ದ್ವಿತೀಯ ಸಂಪುಟದಲ್ಲಿ ಭಗವದಾರಾಧನ ವಿಧಾನ ಗುಣಗಳ ವಿವರಣೆ, ಆಶ್ರಮಗಳ ನಿಯಮ, ದೀಕ್ಷಾ ಸ್ವರೂಪ, ಸ್ನಾನಭೇದಗಳು, ಆತ್ಮಶುದ್ಧಿ, ಮಂತ್ರ ನ್ಯಾಸ ವಿಧಿ, ವಿವಿಧ ಆಸನಗಳು, ನಿತ್ಯೋತ್ಸವ, ಹೋಮದ ವಿಚಾರ, ಮಹಾಭಿಷೇಕ ವಿಚಾರ, ಧ್ವಜಾರೋಹಣ, ಅಂಕುರಾರ್ಪಣ ಕಾಲ, ವಿಧಿ, ನಿಯಮ, ಫಲ ಅರ್ಚನೆಗೆ ಬೇಕಾದ ಪುಷ್ಪ ಹವಿರ್ವಿಧಾನಗಳು. ಕಾಲ ನಿಬಂಧನ, ಭಗವದಾರಾಧನದಲ್ಲಿ ಎಲ್ಲಾ ಅವತಾರಗಳ ಜಯಂತಿ ವಿಚಾರ, ಮಂತ್ರಪೂಜೆ, ವ್ರತಗಳ ವಿವರಣೆ, ಅರಿಷ್ಟ ಶಾಂತಿಗಳು, ಆಲಯಗಳ ಜೀರ್ಣೋದ್ಧಾರವಿಧಿ, ನಿತ್ಯ ನೈಮಿತ್ತಿಕಾದಿ ವೈಕಲ್ಯ ಪ್ರಾಯಶ್ಚಿತ್ತ ವಿಧಿಗಳು, ಉತ್ಸವ ಪ್ರಾಯಶ್ಚಿತ್ತವಿಧಿಗಳು, ಮುದ್ರಾ ವಿಧಿಗಳು, ಮಂತ್ರಗಳ ಮಹಿಮೆ, ಸಿದ್ಧಿ, ದ್ವಾದಶಾಕ್ಷರ, ಅಷ್ಟಾಕ್ಷರಗಳ ಮಹಿಮೆ, ಸುದರ್ಶನ ಮುಂತಾದ ಮಂತ್ರಗಳ ಸಾಧನ ನಿಯಮಗಳು --ಇತ್ಯಾದಿಗಳು ವಿವರವಾಗಿ ಹೇಳಲ್ಪಟ್ಟಿವೆ.

ಭದ್ರಾಚಲದ ಶ್ರೀನಿವಾಸಾಚಾರ್ಯರು ೧೯೩೧ ರಲ್ಲಿ ಪ್ರಕಟಿಸಿದ ಶ್ರೀಪುರುಷೋತ್ತಮ ಸಂಹಿತೆಯಲ್ಲಿ, ಆಚಾರ್ಯಾದಿ ಲಕ್ಷಣಗಳು, ಭೂಪರೀಕ್ಷಾ, ಆಲಯ ನಿರ್ಮಾಣ, ವಿಗ್ರಹ ಲಕ್ಷಣಗಳು ರಥಗಳ ಲಕ್ಷಣ, ಪ್ರತಿಷ್ಠಾಮುಹೂರ್ತ ನಿರ್ಣಯಗಳು, ಯಾಗಶಾಲಾ ಲಕ್ಷಣ, ಅಂಕುರಾರೋಪಣವಿಧಿ, ಹೋಮ ಪ್ರತಿಷ್ಠಾವಿಧಿ, ವಿಮಾನ, ಮಂಟಪ --ಇವುಗಳ ವಿವರಣೆ, ಜೊತೆಯಲ್ಲಿ ಉಪಯುಕ್ತವಾದ

ಧ್ವಜಾರೋಹಣ, ಬ್ರಹ್ಮೋತ್ಸವವಿಧಿ, ಪುಷ್ಪಯಾಗವಿಧಿ, ಪವಿತ್ರೋತ್ಸವ ವಿಧಿ, ನಿತ್ಯ ಸಂವತ್ಸರ ಮುಂತಾದ ಉತ್ಸವಗಳ ವಿಧಿ, ಸಾಲಿಗ್ರಾಮ ಲಕ್ಷಣ ಸ್ನಪನವಿಧಿ, ಶಾಂತಿ ಹೋಮವಿಧಿ, ಅಗ್ನಿಕಾರ್ಯ ವಿಧಿ, ಮುದ್ರಾಲಕ್ಷಣಗಳು --ಇವುಗಳು ವಿವರವಾಗಿ ಉಲ್ಲೇಖಿಸಲ್ಪಟ್ಟಿವೆ. ಭದ್ರಾಚಲದ ಪಿ. ಸೀತಾರಾಮಾನುಜಾಚಾರ್ಯರು ಪ್ರಕಟಿಸಿದ ಶ್ರೀ ಕಪಿಂಜಲ ಸಂಹಿತೆಯಲ್ಲಿ ಪಾಂಚರಾತ್ರ ಆಗಮಶಾಸ್ತ್ರದ ಪೂರ್ಣ ಪರಿಚಯ ನಮಗೆ ಲಭಿಸುತ್ತದೆ. ತಂತ್ರಪಾರಂಗತ ಕೀರ್ತನೇ ಎಂಬುವ ಪ್ರಥಮ ಅಧ್ಯಾಯದಲ್ಲಿ ಕಾಶ್ಯಪರು--

ಕಪಿಂಜಲ ಮಹಾ ಪ್ರಾಜ್ಞ
ಶ್ರುತಾಃ ಪೂರ್ವಂ ಮಯಾನಘಾಃ
ನ ಶ್ರುತಂ ಪಾಂಚರಾತ್ರಾಖ್ಯಂ
ಶಾಸ್ತ್ರಂ ವಿಷ್ಣುಮುಖೋಕ್ಷಿತಂ

--ಎಂಬುವುದಾಗಿ ಪ್ರಶ್ನೆ ಕೇಳುತ್ತಾರೆ. ಅದಕ್ಕೆ ಉತ್ತರವಾಗಿ ಪಾಂಚರಾತ್ರ ಶ್ರವಣ ಮಹಿಮೆ, ದ್ವಿತೀಯ ಅಧ್ಯಾಯದಲ್ಲಿ ಆಚಾರ್ಯ ಲಕ್ಷಣವನ್ನು ತೃತೀಯ ಅಧ್ಯಾಯದಲ್ಲಿ ವೈಷ್ಣವರ ಮಹಿಮೆ, ಸಮಯಾಚಾರವಿಧಿ, ಮುಂದಿನ ಅಧ್ಯಾಯಗಳಲ್ಲಿ ಕಾಲವಿಚಾರ, ಶುಭಾಶುಭ ಶಕುನವಿಚಾರ ಭೂಲಕ್ಷಣ, ಗ್ರಾಮ, ಪ್ರಾಸಾದವಿನ್ಯಾಸವಿಧಿ, ಪ್ರತಿಮಾ ಲಕ್ಷಣ, ಪ್ರತಿಷ್ಠಾ ಲಕ್ಷಣ, ಸ್ನಪನ, ಸಾಧಕಸ್ನಾನ, ಅರ್ಚನಾವಿಧಿಗಳು, ಅಗ್ನಿಕಾರ್ಯ ವಿಧಾನಗಳು, ನಿತ್ಯೋತ್ಸವವಿಧಿ, ದ್ರವ್ಯ ಶುದ್ಧಿ, ಪುಷ್ಪವಿಧಾನ, ಅಂಕುರಾರ್ಪಣ ವಿಧಿ, ಧ್ವಜಾರೋಹಣವಿಧಿ, ಮಂತ್ರವಿಧಿ, ಜೀರ್ಣೋದ್ಧಾರವಿಧಿ, ಮುದ್ರಾಲಕ್ಷಣ, ಪ್ರಾಯಶ್ಚಿತ್ತವಿಧಿ ಮುಂತಾದುವುಗಳ ಪೂರ್ಣ ವಿವರಣೆಗಳಿವೆ.

ಹದಿನೈದನೆಯ ಅಧ್ಯಾಯ ಮಂತ್ರಕೋಶವಿಧಿ ಪ್ರಕರಣ ಬಹಳ ಉಪಯುಕ್ತವಾದ ಅಧ್ಯಾಯ. ಮಂತ್ರ ಮಹಿಮೆಯನ್ನು ಹೇಳುವಾಗ ಕಪಿಂಜಲ ಮಹಾಮುನಿ ಹೇಳುತ್ತಾರೆ--

ಮಂತ್ರಕೋಶಂ ಪ್ರವಕ್ಷ್ಯಾಮಿ
ಸಂಕ್ಷೇಪೇಣ ದ್ವಿಜೋತ್ತಮ
ಮಂತ್ರ ಪೂರ್ವಾಃ ಕ್ರಿಯಾಸ್ಸರ್ವಾಃ
ಫಲ ಸಂಸಿದ್ಧಿ ಹೇತವಃ
ತಸ್ಮಾತ್ ಸರ್ವ ಪ್ರಯತ್ನೇನ
ಮಂತ್ರೈಸ್ಸರ್ವತ್ರ ಪೂಜಯೇತ್

ಮಂತ್ರಗಳು ಕ್ರಿಯಾಸಿದ್ಧಿಯನ್ನು ನೀಡಿ ಸರ್ವ ಫಲಗಳನ್ನು ನೀಡುವಂತಹವು. ಅವುಗಳನ್ನು ಪ್ರಯತ್ನಪೂರ್ವಕವಾಗಿ ಪಠಿಸಬೇಕು -- ಎಂಬುವುದಾಗಿ ಉಪದೇಶಮಾಡಿ, ಅಪೌರುಷೇಯವಾದ ವೇದಗಳ ಒಂದು ಭಾಗವು ಮೂಲಮಂತ್ರ. ಇದನ್ನು ಆಚಾರ್ಯ ಮುಖೇನ ಉಪದೇಶ ಹೊಂದಿದರೆ ಮಾತ್ರ ಸಿದ್ಧಿ, ಈ ಮಂತ್ರವು ಏಕಾಕ್ಷರವಾದ ಓಂ ಎಂಬ ಪ್ರಣವದಿಂದ, ನಮಃ ಎಂಬುವ ಎರಡಕ್ಷರಗಳಿಂದ "ನಾರಾಯಣಾಯ" ಎಂಬುವ ಐದು ಅಕ್ಷರಗಳ ಚರಮಪದದಿಂದಲೂ ಕೂಡಿ "ಅಷ್ಟಾಕ್ಷರೀ" ಎಂಬುವ ಹೆಸರಿನಿಂದ ಪ್ರಸಿದ್ಧವಾಗಿದೆ ಎಂಬುವುದಾಗಿ ಕಪಿಂಜಲರು ಹೇಳುತ್ತ, ಮುಂದೆ--

ಓ ಮಿತಿ ಪ್ರಣವಂ
ಅಮಿತಿ ಪ್ರಣವ ಬೀಜಂ
ಓಂ ನಮೋ ನಾರಾಯಣಾಯ
ಅಮಿತ್ಯಷ್ಟಾಕ್ಷರ ಬೀಜಂ

ಎಂಬುವುದಾಗಿ ಹೇಳುವಾಗ ಅಕಾರ ಉಕಾರ, ಮಕಾರಗಳಿಂದ ಕೂಡಿದ 'ಓಂ' ಎಂಬ ಪ್ರಣವವು ಸಕಲ ವೇದ ಸಂಗ್ರಹ. ಅಕಾರದಿಂದ ಶ್ರೀಮನ್ನಾರಾಯಣನು ಸರ್ವಶೇಷಿ, ಸರ್ವರಕ್ಷಕ, ಸರ್ವಕಾರಣ ಭೂತನು, ಸರ್ವಕಲ್ಯಾಣಭೂತನೆಂದು ಹೇಳಬಹುದು. ಉಕಾರವು ಲಕ್ಷ್ಮಿಗೆ ವಾಚಕ. ನಾರಾಯಣನಿಗೆ ಆಕೆ ಸದಾ ಶೇಷೀಭೂತಳಾಗಿರುತ್ತಾಳೆ. ಮಕಾರವು ಜೀವಾತ್ಮಕನಿಗೆ ವಾಚಕವಾಗಿದೆ. ನಮಃ ಎಂಬುವುದು ಜೀವಾತ್ಮನು ಪರಮಾತ್ಮನಲ್ಲಿ ಶರಣಾಗತಿಯಾಗುವ ಗುಣವನ್ನು ತೋರಿಸುತ್ತದೆ. ನಾರಾಯಣ ಎಂಬುದು ವ್ಯಾಪಕ ಮಂತ್ರಗಳಲ್ಲಿ ಅತಿ ಶ್ರೇಷ್ಠವಾದ ಮಂತ್ರ. ಸುಲಭವಾದ ಸಮಸ್ತಶಾಸ್ತ್ರಗಳ ಸಾರಭೂತವಾದ ಮಂತ್ರ. ಇದು ತಿರುಮಂತ್ರ, ಭಗವಂತನ ಸಕಲಸಲ್ಯಾಣಗುಣಗಳನ್ನು ಪ್ರತಿಪಾದಿಸುವ ಮಂತ್ರ. ಈ ತಿರುಮಂತ್ರವನ್ನು ವೇದಗಳು, ಉಪನಿಷತ್ತುಗಳು, ಋಷಿಗಳು, ಆಚಾರ್ಯರು, ಸಂತರು ಕೊಂಡಾಡಿದ್ದಾರೆ.

ಆರ್ತಾ ವಿಷಣ್ಣಾ ಶ್ಶಿಥಿಲಾಶ್ಚ
ಭೀತಾ ಘೋರೇಷು ಚ
ವ್ಯಾಧಿಷು ವರ್ತಮಾನಾಃ
ಸಂಕೀರ್ತ್ಯ ನಾರಾಯಣ
ಶಬ್ದ ಮಾತ್ರಂವಿಮುಕ್ತ ದುಃಖಾಃ
ಸುಖಿನೋ ಭವಂತಿ

ಈ ತಿರುಮಂತ್ರವನ್ನು -- "ಓಂ ನಮೋ ನಾರಾಯಣಾಯ" --ಅನುಸಂಧಾನ ಮಾಡಿದರೆ, ಆರ್ತರಾಗಲಿ, ಕಷ್ಟದಲ್ಲಿರುವವರಾಗಲಿ ಕಾಯಿಲೆಯಿಂದ ನರಳಿ ಭಯಗ್ರಸ್ತರಾಗಿರುವರಾಗಲೀ ದುಃಖವಿಮುಕ್ತರಾಗಿ ಸುಖವನ್ನು ಹೊಂದುವರು.

ಸರ್ವರ ಅಪೇಕ್ಷಿತ ಫಲಗಳನ್ನು ನೀಡುವ ಶಕ್ತಿ ಈ ಮಂತ್ರಕ್ಕೆ ಇರುವುದರಿಂದ ಇದಕ್ಕೆ ಮಂತ್ರ ರತ್ನವೆಂದು ಹೆಸರು. ನಮಃ ಎಂಬುವುದು ಜೀವಾತ್ಮನ ಅನನ್ಯ ಶರಣ್ಯತ್ವವನ್ನು ಬೋಧಿಸುತ್ತ ಮಾನವನ ಅಹಂಕಾರ ಮಮಕಾರಗಳು ನಾಶವಾಗಿ ಪರಮಾತ್ಮನಲ್ಲಿ ಅನನ್ಯ ಶರಣಾಗತಿ ತತ್ವವನ್ನು ಪ್ರತಿಪಾದಿಸುತ್ತದೆ. ಕಪಿಂಜಲ ಮುನಿಗಳು ಅಷ್ಟಾಕ್ಷರೀ ಮಂತ್ರದ ಅಂಗನ್ಯಾಸವನ್ನು ತಿಳಿಸುವಾಗ--

ಓಂ ಕೃದ್ಧೋಲ್ಕಾಯ ಸ್ವಾಹ
ಓಂ ನಮೋ ನಾರಾಯಣಾಯ
ಹೃದಯಾಯ ನಮಃ
ಓಂ ಮಹೋಲ್ಕಾಯ ಸ್ವಾಹ
ಓಂ ನಮೋ ನಾರಾಯಣಾಯ
ಶಿರಸೇ ಸ್ವಾಹ
ಓಂ ವೀರೋಲ್ಕಾಯ ಸ್ವಾಹ
ಓಂ ನಮೋ ನಾರಾಯಣಾಯ
ಶಿಖಾಯೈ ವಷಟ್
ಓಂ ಉಲ್ಕಾಯ ಸ್ವಾಹ
ಓಂ ನಮೋ ನಾರಾಯಣಾಯ
ಕವಚಾಯ ಹುಂ
ಓಂ ಸಹಸ್ರೋಲ್ಕಾಯ ಸ್ವಾಹ
ಓಂ ನಮೋ ನಾರಾಯಣಾಯ
ಅಸ್ತ್ರಾಯ ಫಟ್

ಎಂಬುವುದಾಗಿ ಅಷ್ಟಾಕ್ಷರಿಯ ಪಂಚ ಅಂಗ ವಿನ್ಯಾಸಗಳನ್ನು ತಿಳಿಸುತ್ತಾರೆ. ದಕ್ಷಿಣ ಭಾರತದ ಎಲ್ಲಾ ಪ್ರಸಿದ್ಧ ದೇವಾಲಯಗಳಲ್ಲಿ ಪಾಂಚರಾತ್ರ ಆಗಮದಲ್ಲೇ ಪೂಜೆಗಳನ್ನು ಮಾಡಬೇಕೆಂದು ಶ್ರೀ ರಾಮಾನುಜರು ಅಪ್ಪಣೆ ಕೊಟ್ಟಿದ್ದಾರೆ. ಮೇಲುಕೋಟೆ (ಯಾದವಾಚಲೇ) ಶ್ರೀರಂಗ, ಶ್ರೀಹಸ್ತಿ ಶೈಲ (ಕಾಂಚೀಪುರ) ಮುಂತಾದ ಸ್ಥಳಗಳಲ್ಲಿ ಪ್ರಮುಖವಾಗಿ ಪಾಂಚರಾತ್ರ ರೀತಿ ಪೂಜೆಗಳು ನಡೆಯುತ್ತಲಿವೆ. ಈಶ್ವರ ಸಂಹಿತೆಯನ್ನು ಇದನ್ನು ಭಾಗವತ ಧರ್ಮವೆಂದು ಸಾರಿದೆ. ಶ್ರೀ ಭಾಷ್ಯದಲ್ಲಿ ಪಾಂಚರಾತ್ರಾಗಮವನ್ನು ಉಲ್ಲೇಖಿಸಲಾಗಿದೆ. ಪುರಾಣಗಳಲ್ಲಿ ವೇದಾಂತಸೂತ್ರಗಳಲ್ಲಿ ಪಾಂಚರಾತ್ರ ಆಗಮವನ್ನು ಪ್ರಾಮಾಣ್ಯವಾಗಿ ಸ್ವೀಕರಿಸಿರುವುದರಿಂದಲೂ ೧೦೮ ಪಾಂಚರಾತ್ರ ಸಂಹಿತೆಗಳಲ್ಲಿ ವೈಖಾನಸ ಸಂಹಿತೆಯನ್ನೂ ಸೇರಿಸಿರುವುದರಿಂದಲೂ ಶಾಂತಿಪರ್ವದ ಮೋಕ್ಷಧರ್ಮ ಅಶ್ವಮೇಧ ಪರ್ವಗಳಲ್ಲಿ ಪಾಂಚರಾತ್ರವನ್ನು ಸರ್ವಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿರುವುದರಿಂದಲೂ ಇದಕ್ಕೆ ಹೆಚ್ಚಾಗಿ ಗೌರವ ಸಂದಿದೆ. ವರಾಹಪುರಾಣ, ಕೂರ್ಮಪುರಾಣ, ವಿಷ್ಣು ಧರ್ಮೋತ್ತರಗಳಲ್ಲಿ ಪಾಂಚರಾತ್ರದ ಮಹಿಮೆ ಅಪಾರವಾಗಿದೆ. ಆದ್ದರಿಂದ ಈ ಆಗಮವು ಮೋಕ್ಷ ಧರ್ಮಶಾಸ್ತ್ರವಾಗಿದೆ. ವೈಖಾನಸ ಆಗಮಕ್ಕೂ ಪಾಂಚರಾತ್ರ ಸಂಹಿತೆಗೂ ತತ್ವ ವಿಷಯದಲ್ಲಿ ಭೇದಗಳು ಇಲ್ಲ. ಭೇದಗಳು ಅತ್ಯಲ್ಪ, ಪರಸ್ಪರನಿಂದೆ, ಅಸೂಯೆಗಳು ಬೇಕಾಗಿಲ್ಲ ಎಂಬುವುದೇ ಎಲ್ಲರ ಮತ. ಅರ್ಥ ಪಂಚಕ ಜ್ಞಾನವು ಈ ಶಾಸ್ತ್ರವನ್ನು ಓದುವುದರಿಂದ ನಮಗೆ ಲಭ್ಯವಾಗುತ್ತ. ಪಂಚಸಂಸ್ಕಾರ, ಪಂಚಭೂತಗಳು, ಪಂಚೇಂದ್ರಿಯಗಳು ಪಂಚವಿಭೂತಿಗಳು -- ಇವುಗಳ ಜ್ಞಾನ ತತ್ವ, ಮಂತ್ರ, ಯಂತ್ರ, ಮಾಯಾ ಯೋಗ, ಮಂದಿರ ನಿರ್ಮಾಣ, ಪ್ರತಿಷ್ಠಾ, ಸಂಸ್ಕಾರ, ವರ್ಣಾಶ್ರಮಧರ್ಮ, ಉತ್ಸವ ಪ್ರಪತ್ಯಾದಿ ಸ್ವರೂಪ (ಮೋಕ್ಷಧರ್ಮ) ಔಷಧಾದಿ ವಿಷಯಗಳು ಈ ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದರಿಂದ ಸರ್ವರಿಗೂ ಈ ಶಾಸ್ತ್ರ ಆದರಣೀಯವಾಗಿದೆ.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕ ಇಡಲಾಗುವುದೆ ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/-

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿ ಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ವಿಶಿಷ್ಟಾದ್ವೈತ ಸಿದ್ಧಾಂತ

---ಪ್ರೊ. ವಸಂತ ಕುಷ್ಟಗಿ.



ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ಹಿಂದೂ ಧರ್ಮದಲ್ಲಿ ವೇದಾಂತ ಜಿಜ್ಞಾಸೆಯು, ತಿಳಿವಳಿಕೆಗಳಲ್ಲಿರುವ ತೊಡಕುಗಳನ್ನು ಬಿಡಿಸುವುದರಲ್ಲಿ ಸಹಾಯ ಮಾಡುತ್ತದೆ. ವೇದಗಳ ಮತಿತಾರ್ಥವು ತಿಳಿದ ಮೇಲೆ ಆಗುವ ಅವಾಚ್ಯ ಆನಂದವೇ ವೇದಾಂತವೆಂದು ಸುಮ್ಮನೆ ಕೂಡಬಹುದು. ಆದರೆ ಇದರಿಂದ ಸಮಾಧಾನವಾಗಲಾರದು. ಅದಕ್ಕಾಗಿ ಈ ಬಗೆಯ ಆನಂದ ಪ್ರಾಪ್ತಿಯ ಕುರುಹುಗಳನ್ನು ತಿಳಿಸಲು ಅದ್ವೈತ, ದ್ವೈತ, ವಿಶಿಷ್ಟಾದ್ವೈತಗಳಂತಹ ಚಿಂತನಗಳು, ಸಮಸ್ಯೆಯ ಅಂತರಾಳವನ್ನು ಹೊಕ್ಕು ಸಾಧ್ಯವಾದ ಮಟ್ಟಿಗೆ ಆ ಸಮಸ್ಯೆಗಳನ್ನು ಬಿಡಿಸಿ 'ಸತ್ಯ'ದ ಸ್ವರೂಪವನ್ನು ಬಯಲಿಗಿಡಲು ಪ್ರಯತ್ನಿಸಿರುವುದು ಇತಿಹಾಸ ಸತ್ಯದ ಮಾತು. ಇಂತಹ ಚಿಂತನಗಳನ್ನು ಸಿದ್ಧಾಂತಗಳೆಂದೂ ಕರೆಯಬಹುದು.

ಮುಖ್ಯವಾಗಿ ವೇದಾಂತದ ಬಗ್ಗೆ ತಿಳಿಹೇಳುವ ಸಿದ್ಧಾಂತಗಳಲ್ಲಿ ಈ ಮೇಲೆ ಹೆಸರಿಸಿದ ಮೂರು ಸಿದ್ಧಾಂತಗಳು ಗಮನಾರ್ಹವಾದುವು. ಇವುಗಳಲ್ಲಿ ವಿಶಿಷ್ಟಾದ್ವೈತವೆಂದರೆ ವಿಶಿಷ್ಟತೆಗಳಿಂದ ಕೂಡಿದ ಅದ್ವೈತ ಸಿದ್ಧಾಂತ. ಇದನ್ನು ರಾಮಾನುಜರ ಸಿದ್ಧಾಂತ ಇಲ್ಲವೆ ರಾಮಾನುಜರ ಮತವೆಂದು ಕರೆಯಲಾಗಿದೆ. ರಾಮಾನುಜರ ಸಿದ್ಧಾಂತದಲ್ಲಿ ಚಿತ್, ಅಚಿತ್ ಮತ್ತು ಈಶ್ವರ ಎಂಬ ಮೂರು ಪದಾರ್ಥಗಳಿವೆ. ಚಿತ್ ಎಂದರೆ ಆತ್ಮ ಅಚಿತ್ ಎಂದರೆ ಅಚೇತನ ಜಗತ್ತು; ಈಶ್ವರ ಎಂದರೆ ಪರಮಾತ್ಮ ಜೀವಾತ್ಮ ಮತ್ತು ಅಚೇತನ ಜಗತ್ತು ಇವೆರಡೂ ಪರಮಾತ್ಮನ ವಿಶೇಷತೆಗಳು.

ಅದ್ವೈತಿಗಳ ಪ್ರಕಾರ "ದೇವರು ಒಬ್ಬನೇ ಸದ್ವಸ್ತು". ಉಳಿದೆಲ್ಲ ಆತನ ಪ್ರತಿಬಿಂಬ. ಪರಮಾತ್ಮನನ್ನು ಬಿಟ್ಟು ಉಳಿದೆಲ್ಲವೂ ನಶ್ವರ ಮತ್ತು ಕ್ಷಣಿಕವಾದುವು. ಅವು ಅವಿದ್ಯೆಯಿಂದ ನಮಗೆ ಸತ್ಯದಂತೆ ಕಾಣುವುವು. ಬ್ರಹ್ಮನಿಗೆ ಏನೂ ವಿಶೇಷಣಗಳಿಲ್ಲ. ವಿಶಿಷ್ಟಾದ್ವೈತಿಗಳ ಪ್ರಕಾರ "ಪರಮಾತ್ಮನು ಸದ್ವಸ್ತು". ಉಳಿದುವೆಲ್ಲವೂ ಆತನ ಪ್ರಕಾರ ಮತ್ತು ವಿಶೇಷಣಗಳು ಅಥವಾ ಶರೀರಗಳು. ಪರಮಾತ್ಮನ ವಿಶೇಷಣಗಳು ಕೂಡ ಸತ್ಯವಾದುವು. ಆದರೆ ಅವು ಪರಮಾತ್ಮನಿಂದ ಸ್ವತಂತ್ರವಾದುವುಗಳಲ್ಲ. ಅವುಗಳಿಗೆ ಪ್ರಕಾರ ಶೇಷ ಮತ್ತು ನಿಯಾಮ್ಯಗಳೆಂದು ಹೆಸರು. ಬ್ರಹ್ಮ ಎಂಬ ಶಬ್ದವನ್ನು ಜೀವಾತ್ಮ ಮತ್ತು ಜಗತ್ತುಗಳೆಂಬ ವಿಶೇಷಣಗಳಿಂದ ಕೂಡಿದ ಪರಮಾತ್ಮನ ಪರವಾಗಿ ಉಪಯೋಗಿಸಬಹುದು. ಮತ್ತೆ ಈ ವಿಶಿಷ್ಟಾದ್ವೈತಗಳ ಪ್ರಕಾರ ದ್ವೈತ ಮತದಲ್ಲಿಯಂತೆ ಜೀವಾತ್ಮರು ಪರಮಾತ್ಮನಿಂದ ಸ್ವತಂತ್ರ ಮತ್ತು ಬೇರೆಯಾದ ಪದಾರ್ಥಗಳಲ್ಲ.

ವಿಶಿಷ್ಟಾದ್ವೈತವೆಂದ ಕೂಡಲೇ ರಾಮಾನುಜರ ಹೆಸರೇ ಅನ್ಯೋನ್ಯವಾಗಿ ಕಂಡುಬರುತ್ತದೆ. ಹಾಗೆಂದಾಕ್ಷಣ ರಾಮಾನುಜರಿಂದಲೇ ಈ ಸಿದ್ಧಾಂತ ಆರಂಭವಾಯಿತೆಂದು ಮಾತ್ರ ತಿಳಿಯಕೂಡದು. ಏಕೆಂದರೆ ರಾಮಾನುಜರು ವಿಶಿಷ್ಟಾದ್ವೈತವನ್ನು ನಿಚ್ಚಳವಾಗಿ ತಿಳಿದುಕೊಂಡು ಪ್ರಚಾರಮಾಡುವ ಮುನ್ನ, ಈ ಮತದ ವಾರಸುದಾರರು ಭಕ್ತಿ ಪರಂಪರೆಯ ಆಳ್ವಾರರುಗಳೇ ಆಗುತ್ತಾರೆ. ಈ ಆಳ್ವಾರುಗಳ ಚಿಂತನದ ರೀತಿಯನ್ನು ನೋಡಿದರೆ ಅವರು ನಮ್ಮಂತೆಯೇ ತರ್ಕ, ತಾಕಲಾಟಗಳವರೇ ಹೌದು. ಭೂಮಿಯ ಮೇಲೆ ಜನ್ಮವೆತ್ತಿ ಮರಣವನ್ನಪ್ಪುವ ಜೀವಕೋಟಿ ಬರುವುದೆಲ್ಲಿಂದ ? ಹೋಗುವುದೆಲ್ಲಿಗೆ? ಜಗತ್ತಿನ ಸೃಷ್ಟಿ ಹೇಗಾಯಿತು? ಸೃಷ್ಟಿ ಇದರ ಉದ್ದೇಶವೇನು ? ಸೃಷ್ಟಿಕರ್ತನ ಸ್ವರೂಪ ಯಾವುದು ಸೃಷ್ಟಿಕರ್ತನು ಇದ್ದಾನೆಯೋ ಇಲ್ಲವೋ

ನಾನು ಯಾರು ? ಆತ ಯಾರು ? ಈತ ಯಾರು? ತಾನು ಯಾರು? ಪಾಪ ಯಾವುದು? ಪುಣ್ಯ ಯಾವುದು ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಿದ್ದಾರೆ. ತಮಗೆ ಸಿಕ್ಕ ಉತ್ತರವನ್ನು ಶ್ರೀಸಾಮಾನ್ಯನಿಗೆ ಭಾಷೆಯ ಮೂಲಕ ತಿಳಿಸಲು ಪ್ರಯತ್ನಿಸಿದ್ದಾರೆ.

ಈ ಆಳ್ವಾರರು ಕ್ರಿ. ಶ. ಆರರಿಂದ ಒಂಬತ್ತನೆಯ ಶತಮಾನದವರೆಗೆ ಇದ್ದರೆಂಬುದು ಇತಿಹಾಸದ ಮಾತು. ಆಳ್ವಾರ್ ಎಂದರೆ ಭಗವದ್ಭಕ್ತಿಯಲ್ಲಿ, ಭಗವಂತನ ಅನಂತ ಕಲ್ಯಾಣ ಗುಣಗಳಲ್ಲಿ, "ಆಳುವವರು", "ಅದ್ದಿರುವವರು", "ಮುಳುಗಿದವರು" ಎಂದರ್ಥ. ಇವರು ಭಕ್ತಿಯ ಕೆಚ್ಚಿನಿಂದ ತಮಿಳಿನಲ್ಲಿ ದೇವರನ್ನು ಕುರಿತು ಕವಿತೆ ಮಾಡಿ ಹಾಡಿದರು. ಇವರು ರಚಿಸಿದ ಕೃತಿಗಳಿಗೆ ಪ್ರಬಂಧಗಳೆಂದು ಹೆಸರು. ಇಂಥ ಪ್ರಬಂಧಗಳು ಸುಮಾರು ನಾಲ್ಕು ಸಾವಿರವೆಂಬ ಲೆಕ್ಕ. ಇವು ಭಕ್ತಿಯ ಸೊಬಗಿನ ವೈವಿಧ್ಯತೆಯನ್ನೂ ಸಡಗರವನ್ನೂ ಬಿತ್ತರಿಸಿ ಶ್ರೀಸಾಮಾನ್ಯನಿಗೂ ವೇದಾಂತವನ್ನು ಅರಿತುಕೊಳ್ಳಲು ಪ್ರಚೋದಿಸುವ ಸಾಹಿತ್ಯ ಸಂಪದ. ಇಂಥ ಸಾಹಿತ್ಯ ನಿರ್ಮಿತಿಯನ್ನು ಮಾಡಿ, ಭಕ್ತಿಪಂಥವನ್ನು ಚೇತೋಹಾರಿ ಮಾಡಿದ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಹನ್ನೆರಡು ಜನ ಆಳ್ವಾರರು ಬರುತ್ತಾರೆ. ಅವರ್ಯಾರು ಎಂದರೆ ಪೊಯ್‌ಗಯ್

ಆಳ್ವಾರ್, ಪೂದತ್ತಾಳ್ವಾರ್, ಪೇಯ್ ಆಳ್ವಾರ್, ತಿರುಮಳಿಶ್ಶೈ ಆಳ್ವಾರ್, ಕುಲಶೇಖರ ಆಳ್ವಾರ್, ವಿಷ್ಣುಚಿತ್ತ ಆಳ್ವಾರ್ (ಪೆರಿಯಾಳ್ವಾರ್), ಆಂಡಾಳ್ (ಗೋದಾದೇವಿ), ತೊಂಡರಡಿಪ್ಪೊಡಿ ಆಳ್ವಾರ್ (ಭಕ್ತಾಂಘ್ರಿರೇಣು), ತಿರುಪ್ಪಾಣೆ ಆಳ್ವಾರ್, ತಿರುಮಂಗೈ ಆಳ್ವಾರ್, ನಮ್ಮಾಳ್ವಾರ್ ಮತ್ತು ಮಧುರ ಕವಿಯಾಳ್ವಾರ್.

ಈ ಎಲ್ಲ ಹನ್ನೆರಡು ಆಳ್ವಾರರು ಏಕದೇವತ್ವವನ್ನೇ ಸಾರಿದರು. ಅಷ್ಟೇ ಅಲ್ಲ. ದೇವರು ಹೇಗಿದ್ದಾನೆಂಬ ಕಲ್ಪನೆಯನ್ನೂ ನೀಡಿದರು. ಅವರ ದೇವರೆಂದರೆ ವಿಷ್ಣು. ಅವನ ಇರುವಿಕೆಯಲ್ಲಿಯೂ, ಅವನು ತೊಟ್ಟ ಆಭರಣಗಳಲ್ಲಿಯೂ, ಹಿರಿದಾದ ಅರ್ಥವನ್ನು ಕಂಡರು. ಕೌಸ್ತುಭಮಣಿ ಚಿದಂಶ -- ಅಸಂಖ್ಯಾತ ಆತ್ಮಗಳ ತವರು. ಶ್ರೀ ವತ್ಸ ಚಿಹ್ನೆ ಅಚಿತ್ -- ಅಚೇತನವಾದ ಜಗತ್ತು; ಪಾಂಚಜನ್ಯ ಮತ್ತು ಧನಸ್ಸು ಇಬ್ಬಗೆಯ ಅಹಂಕಾರದ ಕುರುಹು. ವಿಷ್ಣು ಚಕ್ರ -- ಮನಸ್ಸಿನ ಹಾಗೂ ಚಲನೆಯ ಸಂಕೇತ. ವೈಜಯಂತಿಯಲ್ಲಿನ ಮುತ್ತು, ಮಾಣಿಕ್ಯ ಪಚ್ಚೆ, ನೀಲಮಣಿ ಮತ್ತು ವಜ್ರ -- ಪಂಚಭೂತಗಳು. ನಂದಕವೆಂಬ ಖಡ್ಗ ಜ್ಞಾನದ ಸಂಕೇತವಾದರೆ ಅದರ ಒರೆ ಅಜ್ಞಾನದ ಸಂಕೇತ. ಇಂಥ ಸ್ವರೂಪದ ದೇವರು ಆದಿಶೇಷನ ಮೇಲೆ ಮಲಗಿರುತ್ತಾನೆ. ಲಕ್ಷ್ಮೀದೇವಿಯ ಸಾನ್ನಿಧ್ಯವೂ ಅಲ್ಲಿರುತ್ತದೆ. ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ದೇವರು ಚಿದಚಿದ್ವಿಶಿಷ್ಟವಾದದ್ದು. ಚಿತ್ ಜೀವ. ಪ್ರಕೃತಿ ಅಚಿತ್ತು. ಜೀವರೂ ಮತ್ತು ಪ್ರಕೃತಿ ಆ ದೇವನ ಒಡಲು. ಜೀವನಿಗೆ ಶೇಷವೆಂದೂ, ದೇವನಿಗೆ ಶೇಷಿಯೆಂದೂ ಹೇಳುತ್ತಾರೆ. ಈ ಎಲ್ಲ ಶೇಷರುಗಳ ಒಟ್ಟುಗೂಡುವಿಕೆ ಆದಿಶೇಷ. ಅದರ ಮೇಲೆ ಇರುವವನು ದೇವ. ಇದನ್ನರಿತ ಜೀವ ದೇವನಲ್ಲಿ ಕೈಂಕರ್ಯಭಾವದಿಂದ ನಡೆದುಕೊಂಡು ಕೊನೆಗೆ ಆದಿಶೇಷನ ಅಂಶವಾಗಿ ದೇವರ ಬಳಿಯಲ್ಲಿ ನೆಲೆಸಬೇಕು -- ಮೋಕ್ಷ ಪಡೆಯಬೇಕು; ಅಥವಾ ಪ್ರೇಮದ ದಾರಿ ತುಳಿದು ಲಕ್ಷ್ಮಿಯ ಅಂಶವಾಗಿ ದೇವರ ಸಾಮೀಪ್ಯವನ್ನು ಪಡೆಯಬೇಕು. ಇದನ್ನು ಎಲ್ಲ ವೈಷ್ಣವ ಭಕ್ತರ ಜೀವನ ಚರಿತ್ರೆಗಳು ತೋರಿಸಿಕೊಡುತ್ತವೆ.

ಆಳ್ವಾರರುಗಳಲ್ಲಿ ಗಂಡು ಹೆಣ್ಣು, ಮೇಲು ಕೀಳು, ಜಾತಿ ಪಾತಿಗಳ ಕಟ್ಟುಪಾಡುಗಳಿರಲಿಲ್ಲ. ಆಂಡಾಳ್ ಹೆಣ್ಣು, ತಿರುಮಂಗೈ ಕಳ್ಳರಜಾತಿ, ತಿರುಪಾಣಿ ಅಂತ್ಯಜ, ನಮ್ಮಾಳ್ವಾರ ವೆಳ್ಳಾಳ, ತಿರುವಳಿಶ್ಶೈ ಜಾತಿಯೇ ಗೊತ್ತಿಲ್ಲ. ಕುಲಶೇಖರ ರಾಜ, ಉಳಿದವರು ಬ್ರಾಹ್ಮಣರು. ಆದರೆ ಎಲ್ಲ ಆಳ್ವಾರರು ನಡೆದ ಹಾದಿ ಪರಿಶುದ್ಧ, ಆಡಿದ ಮಾತೆಲ್ಲ ವೇದಕಾವ್ಯ ಅಲ್ಲಿ ತುಂಬಿದ್ದ ನೋಟವೆಲ್ಲ ಭಕ್ತಿಯ ಕಡಲಿನದು. ಅಂತೆಯೇ ಅವರು ದೇವನನ್ನು ತಮ್ಮ ಕುಟುಂಬಕ್ಕೆ ತಂದು ಆತ್ಮೀಯತೆ ಮೆರೆದರು. ಆ ಆತ್ಮೀಯತೆಯನ್ನೆಲ್ಲ ಕವಿತೆಯಾಗಿಸಿ, ದೈವ ಭಕ್ತಿಯನ್ನೂ ಮಾನವ ನೀತಿಯನ್ನೂ, ಸಮಾಜ ನೀತಿಯನ್ನೂ ಪ್ರಸಾರ ಮಾಡಿ ಬದುಕಿಗೆ ಒಳಿತನ್ನು ಹಾರಯಿಸಿದರು.

ಇಂಥ ಆಳ್ವಾರರ ಕವಿತೆಗಳಲ್ಲಿ ಅರ್ಥಾತ್ ಭಕ್ತಿರಸದ ಪ್ರಬಂಧಗಳಲ್ಲಿ ಅವ್ಯಾಜ ಪ್ರೇಮವೇ ಹೆಚ್ಚಾಗಿ ಕಂಡುಬರುತ್ತದೆ. ಅವರು ಸುಮಾರು ನಾಲ್ಕುಸಾವಿರ ಪ್ರಬಂಧಗಳನ್ನು ಬರೆದು ಹಾಡಿರುವರಷ್ಟೆ! ಆ ಎಲ್ಲ ಪ್ರಬಂಧಗಳನ್ನು ಹಾಡುವ ಮುನ್ನ ಮತ್ತು ಅನಂತರ "ತಿರುಪ್ಪಲ್ಲಾಂಡು" ಎಂದು ಪ್ರಸಿದ್ಧಿಯಾಗಿರುವ ಪೆರಿಯಾಳ್ವಾರರ ಮಂಗಳಾಶಾಸನವನ್ನು ಹಾಡುತ್ತಾರೆ. ಆದಾವರೋ ಭಕ್ತಿಯ ಆವೇಶ, ಕಾವ್ಯದ ಸ್ಫೂರ್ತಿ, ಭವ್ಯಕಲ್ಪನೆ, ಸೌಂದರ್ಯ ಲಹರಿ ಮತ್ತು ಸಂಗೀತದ ಝುರಿ -- ಎಲ್ಲದಕ. ಆ ಎಲ್ಲದಕವನ್ನು ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರರು ಕನ್ನಡಿಸಿರುವುದನ್ನು ಚಿತ್ತಕ್ಕೆ ತೆಗೆದುಕೊಳ್ಳೋಣ--

ಹಲಕಾಲ ಹಲಕಾಲ ಹಲವು ಸಾವಿರ ಕಾಲ
ಹಲಕೋಟಿ ನೂರು ಕಾಲ
ಮಲ್ಲನನು ಗೆಲಿದ ನಿಡುದೋಳ ಮಣಿ ವರ್ಣಾ
ನಿನ್ನ ಕೆನ್ನಡಿಯ ಕೆಂಪಿಗೆ ರಕ್ಷೆ ಇರಲಿ
ಈ ದಾಸನಿಗೆ ನಿನಗೆ ಹಲಕಾಲ
ಸಾಸಿರಕು ಸಂಬಂಧ ಹಿಂಜದಿರಲಿ
ನಿನ್ನ ಬಲ ಎದೆಯನ್ನು ಬಿಡದಿರುವ
ಸಿರಿದೇವಿ ಸೊಗವಿರಲಿ ಹಲವು ಕಾಲ
ಮಿಗ ಹೊಗರ ಚೆಲುವ ಸೊಡರಂತೆ
ಬಲಕಿಹ ಚಕ್ರ ಸೊಗವಿರಲಿ ಬಹಳ ಕಾಲ
ಹಗೆಯ ಸೈನ್ಯವ ಹೊಕ್ಕು ಮೊಳಗುವಾ
ಪಾಂಚ್ಯಜನ್ಯಕ್ಕೆ ಸ್ವಸ್ತಿ ಹಲವು ಕಾಲ
ಬ್ರಹ್ಮಾಂಡ ಸಂಕುಲಕೆ ಅಧಿಪತಿಯು
ತಾನಾಗಿ ಅಸುರರನು ರಾಕ್ಷಸರನು
ಇನ್ನುಳಿದ ನೀಚರನು ಎತ್ತಿ
ಆಳಿವಿಗೆ ಒಗೆವ ಆ ಹೃಷಿಕೇಶನೆಡೆಗೆ
ಭಕ್ತ ಕುಲದಲಿ ಇಹರು ಒಂದು
ಅಡಿಯಾಶ್ರಯಿಸಿ ಸಾವಿರದ ಹೆಸರ ಹೇಳಿ
ದುರಭಿಮಾನವನೆಲ್ಲ ತೊರೆದು
ಹಲಕಾಲ ಸಾಸಿರ ಕಾಲ ಬಾಳು ಎನ್ನಿ

ಈ ಪ್ರಬಂಧದ ಜೊತೆಗೆ ತಿರುಮಂಗೈ ಆಳ್ವಾರರ ದೈವಭಕ್ತಿಯನ್ನು ಎತ್ತಿ ತೋರಿಸುವ ಒಂದು ಪ್ರಬಂಧವನ್ನು ನೋಡಿದರೆ ಸಾಕು. ಉಳಿದೆಲ್ಲರ ಪ್ರಬಂಧಗಳ ಸಾರ ಸರ್ವಸ್ವದ ಆಳ ತಿಳಿಯಾಗಿ ಕಾಣತೊಡಗುತ್ತದೆ. ಆದರೆ ಅದನ್ನು ಕಾಣುವ ಕಣ್ಣನ್ನು ಸಾಧಿಸಿಕೊಂಡಿರಬೇಕು. ಅಂತಹ ಕಣ್ಣಿನಿಂದಲೇ ನೋಡಿ ಪರಾಮರ್ಶಿಸೋಣ :

ಕೋಲೂರಿ ನಡೆಯುವಂಥ
ಮುಪ್ಪು ಬರುವ ಮುನ್ನ
ಕಾಲೂರಿ ನಿಲ್ಲುವ ಸ್ಥಿತಿ ಹೋಗುವ ಮುನ್ನ
ತಲೆ ಬಾಗೋಣ ನಮ್ಮಸ್ವಾಮಿಗೆ--
ಹಾಲುಣಿಸಿ ಕೊಲ್ಲಲು ಬಂದ
ಪೂತನಿಯ ಉಸಿರನ್ನೇ ಹೀರಿದ ಸ್ವಾಮಿಗೆ

ಆಳ್ವಾರರ ಪ್ರಬಂಧಗಳು ಜನರಾಡುವ ಮಾತುಗಳಲ್ಲಿ ಭಕ್ತಿಯ ಅದ್ಭುತ ರಮ್ಯತೆಯನ್ನು ತಿಳಿಸಿಕೊಟ್ಟವು. ಹೀಗೆ ತಿಳಿಸಿಕೊಡುವಾಗ, ದೇವರ ಪ್ರೀತಿಯು, ಬೃಂದಾವನದ ಕೃಷ್ಣನ ಇರವೇ ಆಗಿ, ಆ ಸೆಳತಕ್ಕೆ ಭಕ್ತನು ಈಡುಗೊಂಡು ಮೋಕ್ಷಪ್ರಾಪ್ತಿಯಾಗುವ ಬಗೆಯನ್ನು ಪಳಂಚನೆ ಮಿಂಚಿಸಿದುವು. ಆದರೆ ಜ್ಞಾನಕರ್ಮಗಳ ಗುರಿ ಭಕ್ತಿ ಎಂಬುದನ್ನು ಪೂರ್ಣ ಮನಗಂಡು, 'ಶಾಸ್ತ್ರಾಭ್ಯಾಸದಿಂದ ಲಭಿಸಿದ ಜ್ಞಾನವು ಭಕ್ತಿರೂಪವಾಗಿ ಪರಿಣಮಿಸಲಿ' ಎಂದು ಆಳ್ವಾರುಗಳ ಕಾಲವಾದ ಮೇಲೆ ಬಂದ, ಆಚಾರ್ಯರು ಹಾರಯಿಸಿದರು. ಈ ಹಾರಯಿಕೆಯನ್ನು ರಾಮಾನುಜರು ತಮ್ಮ ಶ್ರೀಭಾಷ್ಯದ ಮೊದಲನೆಯ ಶ್ಲೋಕದಲ್ಲಿಯೇ ಸ್ಪಷ್ಟಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಸಾರವನ್ನು ಕಂಡಾಗ ಆಳ್ವಾರರು ಸಂತರಾಗಿ ಭಕ್ತಿಯ ಪಾರಮ್ಯದಲ್ಲಿ ಭಗವಂತನನ್ನು ಕಂಡರೆ, ಆಚಾರ್ಯರು ತತ್ತ್ವಜ್ಞಾನವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸಿ ಪರಮಾತ್ಮನ ಬಗ್ಗೆ ತಿಳಿವಳಿಕೆಯನ್ನು ಹಬ್ಬಿಸಿದರು. ಗೀತಾಚಾರ್ಯ ಕೃಷ್ಣನ ಅಂತರಂಗವನ್ನು ಪರಿಚಯಿಸಿದರು.

ಈ ಆಚಾರ್ಯ ಪರಂಪರೆಯಲ್ಲಿ ನಾಥಮುನಿಗಳು ಮೊದಲಿಗರು (ಕ್ರಿ.ಶ. ೮೨೪--೯೨೪). ಅನಂತರ ಉಯ್ಯಕೊಂಡಾರ್ ಅಥವಾ ಪುಂಡರೀಕಾಕ್ಷ, ರಾಮಮಿಶ್ರ, ಯಮುನಾಚಾರ್ಯರು ಬರುತ್ತಾರೆ. ಯಾಮುನಾಚಾರ್ಯರ ಅನಂತರ ಬರುವ ಸತ್ತ್ವಯುತ ಆಚಾರ್ಯರೆಂದರೆ ರಾಮಾನುಜಾಚಾರ್ಯರು. ನಾಥಮುನಿಗಳು ತಮಗಿಂತಲೂ ಮುಂಚೆ ಇದ್ದ ಟಂಕ, ದಮಿಡ, ಗುಹದೇವ, ಕಪರ್ದಿನ್, ಭಾರುಚಿ ಮೊದಲಾದ ಸಂಸ್ಕೃತ ಪರಂಪರೆಯ ಆಚಾರ್ಯರು ನಡೆದು ಬಂದ ಮಾರ್ಗವನ್ನು ಆಳ್ವಾರರು ನಡೆದ ದೇಸೀಯ ತಮಿಳು ಪರಂಪರೆಯನ್ನೂ ಒಂದುಗೂಡಿಸಿ ಮಹಾನದಿಯಾಗಿಸಿದರು. ಮುಂದೆ ರಾಮಾನುಜರು ಆ ಮಹಾನದಿಯನ್ನು ವಿಶ್ವದಾದ್ಯಂತ ಅಜರಾಮರಗೊಳಿಸಿದರು.

ರಾಮಾನುಜರ ಕಾಲ ಕ್ರಿ.ಶ. ೧೧೦೭ ರಿಂದ ೧೧೩೭ (ಹೆಚ್. ಜೆ. ರಾಮಯ್ಯಂಗಾರ್ ಅವರ ವಿಶಿಷ್ಟಾದ್ವೈತದ ಪಂಚಾಚಾರ್ಯರ ಪುಸ್ತಕ

ಪುಟ ೨೭); ೧೨೦ ವರ್ಷಗಳ ತುಂಬು ಜೀವನದಲ್ಲಿ ಆಚಾರ್ಯರು ಸರ್ವಶಾಸ್ತ್ರಪಾರಾಂಗತರಾಗಿ, ಇಹ--ಪರ, ಬುದ್ಧಿ--ಭಾವ, ಆದರ್ಶ ಯಥಾರ್ಥ ಎಲ್ಲವರ ಮಧುರ ಸಮನ್ವಯವನ್ನು ಸಾಧಿಸಿದರು. ಇಂದ್ರಿಯ ಹಾಗೂ ಆತ್ಮ ಕಲ್ಯಾಣಗಳಿಗೆ ನೆರವಾಗಿ ವ್ಯಕ್ತಿ ಶೀಲದೊಂದಿಗೆ ವಿಶ್ವಕಲ್ಪನೆಯನ್ನು ಬೋಧಿಸಿದರು. ಅವರ ವಿಚಾರದರ್ಶನವು ನಿಚ್ಚಳವಾಗಿ ತಿಳಿಯಬೇಕೆಂದು, ವ್ಯಾಸರ ಬ್ರಹ್ಮಸೂತ್ರಗಳಿಗೆ ಶ್ರೀಭಾಷ್ಯ ಗದ್ಯತ್ರಯ (ಶ್ರೀ ವೈಕುಂಠಗದ್ಯ ಶ್ರೀರಂಗ ಗದ್ಯ ಶರಣಾಗತಿಗದ್ಯ), ಗೀತಾಭಾಷ್ಯ ವೇದಾರ್ಥ ಸಂಗ್ರಹ, ವೇದಾಂತಸಾರ, ವೇದಾಂತದೀಪ ಮತ್ತು ನಿತ್ಯಗ್ರಂಥ ಎಂಬ ಏಳು ಗ್ರಂಥಗಳನ್ನು ರಚನೆ ಮಾಡಿದರು.

ರಾಮಾನುಜರ ಗ್ರಂಥಗಳಲ್ಲಿ ಅವರು "ಬ್ರಹ್ಮ ಸೂತ್ರ"ಕ್ಕೆ ಬರೆದ ಶ್ರೀಭಾಷ್ಯವು ಮಹತ್ವದ್ದು, ಏಕೆಂದರೆ ಯಾಮುನಾಚಾರ್ಯರ ಬಹು ಮುಖ್ಯವಾದ ಸಂಕಲ್ಪವನ್ನು ಪೂರ್ಣಮಾಡಿದ ಪುಣ್ಯ ಅವರಿಗೆ ತಟ್ಟಿದ್ದು ಆ ಮುಖಾಂತರ. ಇಲ್ಲಿ ವಿಶಿಷ್ಟಾದ್ವೈತದ ದೃಷ್ಟಿಯ ಸ್ಪಷ್ಟ ನಿಲುವು ದೊರೆಯುತ್ತದೆ. ಸಂಕುಚಿತ ದೃಷ್ಟಿಗಳು ದೂರ ಸರಿದು ಮನುಕುಲದ ಒಟ್ಟು ಕಲ್ಯಾಣವು ಅಲ್ಲಿ ಬೆಳಕಾಗಿ ಚಿಮ್ಮಿರುವುದು ಕಂಡುಬರುತ್ತದೆ. ಅವರಿಂದಾಗಿ ಅನೇಕ ಪ್ರಮೇಯಗಳಿಗೆ ಪರಿಹಾರವನ್ನು ನೀಡುವಲ್ಲಿ ಈ ಭಾಷ್ಯ ಅಪರೂಪವೆಂದೆನ್ನಿಸುತ್ತದೆ. ಅದಕ್ಕೆ ಕಾರಣ, ರಾಮಾನುಜರು ಈ ಗ್ರಂಥವನ್ನು ಬರೆಯುವ ಮುನ್ನ ಕೂರೇಶ ಎಂಬವರೊಡನೆ ಕಾಶ್ಮೀರಕ್ಕೆ ನಡಿಗೆಯಿಂದ ಹೋಗಿ ಏಕಮಾತ್ರ ಪ್ರತಿಯಾಗಿ ಉಳಿದಿದ್ದ ವ್ಯಾಸರ ಶಿಷ್ಯ ಬೋಧಾಯನರ ವೃತ್ತಿಯನ್ನು ಓದಿಕೊಂಡು ಬಂದುದು ಒಂದು ಮಹತ್ವದ ಸಂಗತಿ. ಅನಂತರ ಬರೆದ ರಾಮಾನುಜರ ಈ ಗ್ರಂಥದಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲೂ ನಾಲ್ಕು ಪಾದಗಳಿವೆ. ೧೫೬ ಅಧಿಕರಣಗಳೂ ೫೪೫ ಸೂತ್ರಗಳೂ ಇವೆ. ಮೊದಲನೆಯ ಅಧ್ಯಾಯದಲ್ಲಿ ಜೀವ ಪ್ರಕೃತಿಗಳಿಂದ ಕೂಡಿದ ಶ್ರೀಮನ್ ನಾರಾಯಣನೇ ಜಗತ್ತಿನ ಕಾರಣನೆಂಬ ವಿಷಯ ನಿರ್ಧರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಪರಬ್ರಹ್ಮ ಸ್ವರೂಪವನ್ನು ಕುರಿತು ಇತರ ಮತಗಳು ಸಮಂಜಸವಾಗಿಲ್ಲವೆಂದು ಪ್ರಸ್ಥಾಪಿತವಾಗಿದೆ. ಮೂರನೆಯ ಅಧ್ಯಾಯದಲ್ಲಿ ದೇವರ ಅನುಗ್ರಹವನ್ನು ಪಡೆಯಲು ಅನುಸರಿಸಬೇಕಾದ ಉಪಾಯವನ್ನು -- ಭಕ್ತಿಯನ್ನು -- ಕುರಿತ ವಿಚಾರವಿದೆ. ನಾಲ್ಕನೆಯ ಅಧ್ಯಾಯದಲ್ಲಿ ಮೋಕ್ಷದ ಸ್ವರೂಪವನ್ನು ಮೋಕ್ಷಾನುಭವವನ್ನು ವರ್ಣಿಸಲಾಗಿದೆ. ಹೀಗೆ ಶ್ರೀಭಾಷ್ಯವು ವಿಶಿಷ್ಟಾದ್ವೈತ ತತ್ವವನ್ನು ತರ್ಕಬದ್ಧವಾಗಿ ಸ್ಥಾಪಿಸುವ ಗ್ರಂಥ.

ರಾಮಾನುಜರ ಈ ಶ್ರೀಭಾಷ್ಯ ಮತ್ತು ಅವರ ಇತರ ಗ್ರಂಥಗಳ ಆಧಾರದಿಂದ ವಿಶಿಷ್ಟಾದ್ವೈತ ಸಿದ್ಧಾಂತದ ಮೂಲಭೂತ ಅಂಶಗಳನ್ನು ಸಂಗ್ರಹಿಸಿ ಈ ಕೆಳಗಿನಂತೆ ನೀಡಲು ಸಾಧ್ಯ.

"ಸೃಷ್ಟಿಗಿಂತ ಮೊದಲು ಪರಮಾತ್ಮನಿಗೆ ಸೂಕ್ಷ್ಮವಾದ ಶರೀರವಿರುವುದು. ಸೃಷ್ಟಿಯಾದ ಮೇಲೆ ಅದು ಬೆಳೆದು ವಿಶ್ವದ ರೂಪವನ್ನು ಹೊಂದುವುದು. ಆದುದರಿಂದ ಬ್ರಹ್ಮನು ಜಗತ್ತಿನ ಉಪಾದಾನ ಕಾರಣನು. ಪರಬ್ರಹ್ಮನು ಜಗತ್ತನ್ನು ನಿರ್ಮಿಸಬೇಕೆಂದು ಇಚ್ಛಿಸುವುದರಿಂದಲೂ ಜಗತ್ತಿನ ಅಂತರ್ನಿಯಾಮಕನಾಗಿರುವುದರಿಂದಲೂ ಜಗತ್ತಿಗೆ ನಿಮಿತ್ತಕಾರಣನಾಗಿರುವನು. ಅಚೇತನ ಜಗತ್ತಿನ ಸೂಕ್ಷ್ಮರೂಪವೇ ಪ್ರಕೃತಿ. ಅದು ಅಂತರ್ನಿಯಾಮಕವಾಗಿರುವ ಪರಮಾತ್ಮನ ರಕ್ಷಣೆಯಲ್ಲಿ ಬೆಳೆದು ಬ್ರಹ್ಮಾಂಡದ ಸ್ವರೂಪವನ್ನು ಹೊಂದುವುದು. ಬ್ರಹ್ಮಾಂಡದ ಕರ್ತೃ ಈಶ್ವರ.

"ಈಶ್ವರನು ದೋಷರಹಿತನು, ನಿತ್ಯನು, ಚೇತನಾಚೇತನ ವಸ್ತುಗಳಲ್ಲಿ ವ್ಯಾಪ್ತನು, ಅಂತರ್ಯಾಮಿ, ಸಚ್ಚಿದಾನಂದನು; ಜ್ಞಾನ, ಶಕ್ತಿ ಮೊದಲಾದ ಕಲ್ಯಾಣ ಗುಣಗಳುಳ್ಳವನು. ವಿಶ್ವದ ಸೃಷ್ಟಿ--ಸ್ಥಿತಿ--ಸಂಹಾರ ಕರ್ತನು. ಆರ್ತ, ಜಿಜ್ಞಾಸು, ಮುಮುಕ್ಷು ಮೊದಲಾದವರಿಂದ ಭಜಿಸಲ್ಪಡುವವನು. ಧರ್ಮ -- ಅರ್ಥ -- ಕಾಮ -- ಮೋಕ್ಷಪ್ರದನು, ಆಶ್ಚರ್ಯಕರವಾದ ಅನುಪಮ ಸೌಂದರ್ಯಯುಕ್ತವಾದ ದೈವಿಕ ಶರೀರದಿಂದ ಕೂಡಿದವನು. ಈತನಿಗೆ ಲಕ್ಷ್ಮೀ, ಭೂ, ನೀಳಾ ಎಂಬ ಹೆಸರಿನ ಪತ್ನಿಯರಿರುವರು. ಈಶ್ವರನು ಪರ, ವಿಭವ ರೂಪ, ವ್ಯೂಹರೂಪ, ಅಂತರ್ಯಾಮಿ ರೂಪ, ಅರ್ಚಾಸ್ವರೂಪ ಎಂಬ ಐದು ರೂಪಗಳಲ್ಲಿ ಪ್ರಕಟನಾಗುವನು".

ಜೀವಾತ್ಮರ ಸ್ವರೂಪದ ಬಗ್ಗೆ ವಿಶಿಷ್ಟಾದ್ವೈತದ ಸಿದ್ಧಾಂತವು ಹೇಳಿಕೊಡುವ ರೀತಿಯು ಹೀಗಿದೆ;

"ಜೀವನು ಸ್ವಪ್ರಕಾಶಯುಕ್ತ, ಆನಂದಮಯ, ನಿತ್ಯ ಅದೃಶ್ಯ ಮನಸ್ಸು ಮತ್ತು ಇಂದ್ರಿಯಗಳಿಗೆ ಅತೀತ, ನಿಷ್ಕಲ, ಅಕ್ಷರ, ಜ್ಞಾನಸ್ವರೂಪನು. ಪರಮಾತ್ಮನಿಗೆ ಶರೀರದಂತೆ ಅಧೀನನು, ದೇವರ ವಿಶೇಷಣ ಸ್ವರೂಪನು ಮತ್ತು ದೇವರೊಡನೆ ಸಂಬಂಧಿಸಿದ ಅಸ್ತಿತ್ವ ಉಳ್ಳವನು."

ಜೀವಾತ್ಮರು ಅಸಂಖ್ಯರಾಗಿರುವರು. ಅವರಲ್ಲಿ ಬದ್ಧ, ಮುಕ್ತ ಮತ್ತು ನಿತ್ಯರೆಂದು ಮೂರು ವಿಧ.

"ಭಕ್ತಿಗೆ ಕರ್ಮಯೋಗ ಮತ್ತು ಜ್ಞಾನಯೋಗಗಳೆರಡೂ ಅಗತ್ಯ. ಕರ್ಮಯೋಗದಿಂದ ಆತ್ಮಶುದ್ಧವಾಗಿ ಜ್ಞಾನಯೋಗದ ಅನುಷ್ಠಾನ ಸಾಧ್ಯವಾಗುವುದು. ಯೋಗಗಳು ಅಷ್ಟಾಂಗದಿಂದ ಕೂಡಿ, ಭಕ್ತಿಯೋಗವು ಸಮಾಧಿಯಿಂದ ಮುಕ್ತವಾದುದು" ಹೀಗೆ ಸಾಗಿದ ಬದುಕಿಗೆ ದೇವರನ್ನು ಮನಸ್ಸಿನಲ್ಲಿ ಪ್ರತ್ಯಕ್ಷತೆಗೊಳಿಸಿಕೊಳ್ಳುವ ಸಿದ್ಧಿ ಪ್ರಾಪ್ತವಾಗುತ್ತದೆ. ಅಷ್ಟೇ ಅಲ್ಲ ಪ್ರತ್ಯಕ್ಷವಾಗಿ ಆತನನ್ನು ಕಾಣಲೂ ಸಾಧ್ಯವಾಗುತ್ತದೆ.

ಇಂಥ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜರು ಕೇವಲ ತತ್ವಪ್ರತಿಪಾದನೆಗೆ ಮಾತ್ರ ಮೀಸಲಾಗಿರಿಸದೇ, ಸಮಾಜೋದ್ಧಾರ, ಸಮಾಜ ಸುಧಾರಣೆ, ದಲಿತೋದ್ಧಾರ, ರೈತೋದ್ಧಾರ, ಕಲಿಯುಗದ ಶ್ರೇಷ್ಠ ಭಕ್ತಿಯಾದ, "ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವುವು" ಎಂಬ ನಾಮ ಸಂಕೀರ್ತನೆ ಮೊದಲಾದ ಕಡೆಗೂ ಒತ್ತು ಕೊಟ್ಟರು. ಕೆಳಗಿನ ಜಾತಿಯಲ್ಲಿ ಹುಟ್ಟಿದ್ದರೂ ಯೋಗ್ಯತೆಯಿದ್ದಲ್ಲಿ ಅಂತಹವರೇ ಶ್ರೇಷ್ಠರು ಎಂಬುದನ್ನು ಭಾಳಿಸಿದರು. ಮುಕ್ತಿಗೆ ಎಲ್ಲರೂ ಹಕ್ಕುದಾರರು ಎಂದು ಪ್ರತಿಪಾದಿಸಿದರು. ಹೀಗೆಂದೇ ರಾಮಾನುಜರು ವಿಶ್ವಕುಟುಂಬಿಗಳು. ಜಾತಿಭೇದಗಳನ್ನು ದಿಕ್ಕೆಟ್ಟು ಓಡಿಸಲು ಪ್ರಯತ್ನಿಸಿದ ವಿಶಾಲ ಹೃದಯದ ಧೀಮಂತರು. ಮೇಲು ಕೀಳುಗಳಿಲ್ಲದ ಎಲ್ಲರನ್ನು ತುಂಬು ಹೃದಯದಿಂದ ಬಾಚಿಕೊಂಡು ಶ್ರೀವೈಷ್ಣವ ದೀಕ್ಷೆಕೊಟ್ಟ ಮಹಾನುಭಾವರು. ದೆಹಲಿ ಬಾದಷಹನ ಬಳಿ ಹೋಗಿ, ಆತನ ಪುತ್ರಿಯ ಭಕ್ತಿಯನ್ನು ಮೆಚ್ಚಿ ಹಾಡಿ ಹರಿಸಿದ ಪರಮತ ಸಹಿಷ್ಣುರು. ಅಂತೆಯೇ ವಿಶಿಷ್ಟಾದ್ವೈತ ಸಿದ್ಧಾಂತ ಶ್ರೀವೈಷ್ಣವ. ಪರಮಾತ್ಮನಲ್ಲಿ ಒಲುಮೆಗೆ ಕುಲಗೋತ್ರವಿಲ್ಲವೆಂದ ಶ್ರೀದರ್ಶನದ ದಾರ್ಶನಿಕರು, ಪರಮಾತ್ಮನಲ್ಲಿ ಅನನ್ಯ ಭಕ್ತಿ ಮತ್ತು ಶರಣಾಗತಿಯು ಪ್ರತಿಯೊಬ್ಬನ ಗುರಿಯಾಗಿದ್ದರೆ ಬದುಕು ಸಸಾರವೆಂದ ಶ್ರೀಸಂಪ್ರದಾಯದ ಮಾನವ ಪ್ರೇಮಿಗಳು.

ಇಂಥ ಗುಣ ಗೌರವಗಳನ್ನು ಹೊಂದಿದ್ದ ರಾಮಾನುಜರು, ಮೊದಲೇ ಮಾನವ ಕುಲ ಒಂದೇ ಎಂಬುದನ್ನು ತಿಳಿಹೇಳಿ ಅದರಂತೆ ನಡೆದ ವೇದಪಾರಾಯಣ ಸಮಾಜ ಸುಧಾರಕರು. ಜನಹಿತ ಜನಪರ ಗುಣಧರ್ಮಿಗಳು. ಅವರು ತಿಳಿದುಕೊಂಡು ಪ್ರತಿಪಾದಿಸಿದ ವಿಶಿಷ್ಟಾದ್ವೈತ ಸಿದ್ಧಾಂತವೇ ಈ ಶ್ರೀವೈಷ್ಣವ ಸಿದ್ಧಾಂತ. ವೇದಾಂತವನ್ನು ಸಾಮಾನ್ಯರ ಹೃದಯಕ್ಕೂ ಮುಟ್ಟುವಂತ ಪರಿಶ್ರಮಿಸಿದ ಸಿದ್ಧಾಂತವೂ ಕೂಡ ಇದೇ. ಇದು ಶ್ರೀ ಸಂಪ್ರದಾಯವೂ ಹೌದು.



# ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್ಸ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರದೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**

ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**

ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್

ಮೆಡಿಕಲ್ ಸೈನ್ಸಸ್, ತಿರುಪತಿ.

# ಶ್ರೀ ತುಳಸಿ

---ವಿದ್ವಾನ್ ರಘುಸುತ.

ಸುವಾಸನಾಮಯ ತುಳಸಿಯನ್ನು ಸಾಮಾನ್ಯವಾಗಿ ಪ್ರತಿಯೊಬ್ಬ ಭಾರತೀಯನೂ ತನ್ನ ಮನೆಯಂಗಳದಲ್ಲಿ ಅಥವಾ ಮನೆಯ ಮುಂದೆ ಒಂದು ಕಟ್ಟೆಯಲ್ಲಿ ಅಥವಾ ಬೃಂದಾವನ ಎನ್ನುವ ನಿರ್ಮಾಣದಲ್ಲಿ ನೆಟ್ಟು ಬೆಳೆಸುವನು. ಇದು ಅವನ ಕರ್ತವ್ಯಗಳಲ್ಲಿ ಒಂದು ಎಂದು ಭಾವಿಸಲಾಗುತ್ತದೆ. ಆ ಸಸಿ ಇರುವ ಬೃಂದಾವನದ ಎದುರಿನಲ್ಲಿ ನೆಲವನ್ನು ಗುಡಿಸಿ, ಸಾರಿಸಿ, ರಂಗೋಲೆ ಇಟ್ಟು ಅಲಂಕರಿಸುವರು. ಆ ಸಸಿಗೆ ಸಚೇಲ ಸ್ನಾನ ಮಾಡಿದ ಹೆಂಗಸರು, ಅರಶಿನ, ಕುಂಕುಮಗಳನ್ನು ಇರಿಸಿ, ಪೂಜೆ ಮಾಡಿ, ಸಾಮ್ರಾಣಿ ಕಡ್ಡಿಯನ್ನು ಹಚ್ಚಿ, ಕರ್ಪೂರದ ಮಂಗಳಾರತಿ ಹಾಗೂ ಆರತಿಯನ್ನು ಎತ್ತುವರು. ಅಂತೆಯೇ ವೈಷ್ಣವರು ಭಜನೆಗಳನ್ನು ಮಾಡುತ್ತ ಆ ಬೃಂದಾವನವನ್ನು ಪ್ರದಕ್ಷಿಣೆ ಮಾಡುವರು. ಉತ್ತರ ಭಾರತದಲ್ಲಿನ ಅಸ್ಸಾಂ, ಬಂಗಾಳಾದಲ್ಲಿ ಇದು ಸರ್ವೇ ಸಾಮಾನ್ಯ ದೃಶ್ಯ. ಗಂಡಸರು ಹೆಂಗಸರು ಎನ್ನದೆ ತುಳಸಿಯನ್ನು ಪೂಜೆ ಮಾಡುವರು.ಈ ಸಸಿಯ ದೈವೀಕ ಗುಣಗಳಿಗಾಗಿ ಹಾಗೂ ವೈದ್ಯಕೀಯ ಉಪಯೋಗದಿಂದಾಗಿ ಪರಿಮಳ ಯುಕ್ತ ತುಳಸಿಯ ಪ್ರತಿಯೊಬ್ಬ ಭಾರತೀಯನಿಗೂ ಪವಿತ್ರವಾದುದಾಗಿದೆ.

## ಮೂಲ ಮತ್ತು ಇತಿಹಾಸ

ತುಳಸಿ ಪದದ ಪ್ರಸ್ತಾಪವು ವೇದಗಳಲ್ಲಿ ಇಲ್ಲ. ಇಷ್ಟೊಂದು ಮಹತ್ವಪೂರ್ಣವಾದ ಸಸಿಯ ಹೆಸರು ಪ್ರಾಚೀನ ಆಯುರ್ವೇದದ ಗ್ರಂಥಗಳಲ್ಲಿಯೂ ಇಲ್ಲದಿರುವುದು ಆಶ್ಚರ್ಯ. ಚರಕ ಸಂಹಿತಾ, ಸುಶ್ರುತ ಸಂಹಿತಾ, ಕಾಶ್ಯಪ ಸಂಹಿತಾ -- ದಂತಹ ಪುರಾತನ ಗ್ರಂಥಗಳಲ್ಲಿ ಈ ಹೆಸರೇ ಇಲ್ಲ. ಶ್ರೇಷ್ಠ ಆಯುರ್ವೇದ ಗ್ರಂಥವಾದ 'ಅಷ್ಟಾಂಗ ಹೃದಯ' ದಲ್ಲಿಯೂ ತುಳಸಿಯ ಹೆಸರಿಲ್ಲ.

ಆದರೆ ತುಳಸಿಗೆ ಪ್ರಾಮುಖ್ಯ ಬಂದದ್ದು ಪುರಾಣ ಗ್ರಂಥಗಳು ಬೆಳಕಿಗೆ ಬಂದ ನಂತರವೇನೇ!

ಅಮರ ಸಿಂಹನ 'ಅಮರಕೋಶ'ದಲ್ಲಿಯೂ ತುಳಸಿ ಪದವಿಲ್ಲ. ಇದು ನಿಜವಾಗಲೂ ಆಶ್ಚರ್ಯದ ಸಂಗತಿ.

ಆದರೆ ಅಮರಕೋಶದಲ್ಲಿ ಹಾಗೂ ಅದಕ್ಕೂ ಹಿಂದಿನ ಗ್ರಂಥಗಳಲ್ಲಿ ಸುರಸ ಎನ್ನುವ ಪದದ ಪ್ರಯೋಗವಿದೆ. ಈ ಹೆಸರು ಬೇರೆ ವನಸ್ಪತಿಗೆ ಅನ್ವಯಿಸುವುದಾದರೂ, ಅದು ಹೇಗೋ ಕಾಲಾಂತರದಲ್ಲಿ ಈ ಪ್ರಯೋಗವು ಈಗಿನ ತುಳಸಿ ಸಸ್ಯಕ್ಕೆ ಅನ್ವಯವಾದದ್ದು ಇನ್ನೂ ಬಿಡಿಸಲಾಗದ ಒಗಟಾಗಿಯೇ ಉಳಿದಿದೆ. ಬಹುಶಃ ಈಗ ಚಾಲ್ತಿಯಲ್ಲಿರುವ ತುಳಸಿ ಸಸ್ಯವು ನಮ್ಮ ನಾಡಿನದಲ್ಲ ಎನ್ನಿಸುತ್ತದೆ. ಏಕೆಂದರೆ ತುಳಸಿಯು ಭಾರತದಲ್ಲಿ ಉತ್ಪನ್ನವಾದ ಸಸ್ಯ ಎಂಬುದರ ಬಗ್ಗೆಯೂ, ಸಂಶೋಧಕರ ಮನಸ್ಸಿನಲ್ಲಿ ಸಂಶಯವಿದೆ. ಈ ಸಸಿ ಹಾಗೂ ಈಗಿನ ಹೆಸರು ಇವೆರಡೂ ಕ್ರಿ.ಶ. 9--10 ನೇ ಶತಮಾನದಲ್ಲಿ ಒಂದುಗೂಡಿ, ಅಲ್ಲಿಂದೀಚೆಗೆ ಮುಂದುವರಿದುಕೊಂಡು ಬಂದಿರಬಹುದು. ಈ ಸಸಿಯ ಪ್ರಾಮುಖ್ಯ ಕ್ರಿ.ಶ. ೧೨ -- ೧೪ ನೇ ಶತಮಾನಗಳಲ್ಲಿ ಹೆಚ್ಚಾಗಿರಬಹುದು. ಈ ಸಂಶಯ ಬರುವುದಕ್ಕೆ ಕಾರಣವೆಂಧರೆ ತುಳಸಿ ಸಸಿಯು ಇಂದಿಗೂ ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಬೆಳೆಯುತ್ತದೆ.

ಭಾಷಾಶಾಸ್ತ್ರದ ದೃಷ್ಟಿಯಿಂದ ಸುರಸ -- ಸುರಸಿ -- ಸುಲಸಿ -- ಚುಲಸಿ -- ತುಲಸಿ -- ತುಳಸಿ -- ಎಂದಾಗಿರಬಹುದು ಎಂಬ ಅನುಮಾನ.

'ತುಳಸಿಗಿರುವ ಪ್ರಾಮುಖ್ಯ ಅದರ ಔಷಧದ ಗುಣ ಕಾರಣ -- ಎಂದು ಹೇಳಲಾಗುವುದಿಲ್ಲ. ಪುರಾಣಗಳನ್ನು ರಚಿಸಿದವರು ಈ ಸಸ್ಯಕ್ಕೆ ಇಷ್ಟೊಂದು ಪ್ರಾಮುಖ್ಯ ಏಕೆ -- ಹೇಗೆ ಕೊಟ್ಟರು -- ಎನ್ನುವುದಕ್ಕೂ ಕಾರಣ ತಿಳಿದುಬಂದಿಲ್ಲ. ಆದರೆ ಇದು ಸಾಮಾನ್ಯ ಜನತೆಯಲ್ಲಿ ಮನೆ ವೈದ್ಯನಾಗಿ ಹಾಗೂ ಜಾನಪದ ವೈದ್ಯನಾಗಿ ಎಲ್ಲರಿಗೂ ಚಿರಪರಿಚಿತ'.

ಬಹಳಷ್ಟು ಸಸಿಗಳು ಭಾರತದ ಮೂಲದ್ದಲ್ಲ. ಉದಾಹರಣೆ ತೆಂಗಿನಕಾಯಿ, ಮೆಣಸಿನಕಾಯಿ, ಸಿಹಿ ಕುಂಬಳಕಾಯಿ, ಕಾಫಿ, ಟೀ, ಹೊಗೆ ಸೊಪ್ಪು ಇವೆಲ್ಲ ವಿದೇಶದ್ದು. ಆದರೆ ಇಂದು ಭಾರತೀಯ ಜನಜೀವನದಲ್ಲಿ ಒಂದಾಗಿ ಹೋಗಿವೆ. ಇವು ಭಾರತದ್ದೇ ಎನ್ನುವಷ್ಟು ಮೂಲದ್ದನ್ನು ಮರೆಸಿವೆ. ಇದೇ ರೀತಿಯಲ್ಲಿ ತುಳಸಿಯೂ ಕೂಡ ವಿಸ್ತೃತ ರೀತಿಯಲ್ಲಿ ಭಾರತೀಯ ಜನಜೀವನದಲ್ಲಿ ಒಂದಾಗಿ, ನಮ್ಮದೇ ಮೂಲದ್ದು ಎನ್ನುವಷ್ಟು ಸಹಜತೆ ಬೆಳೆದು ಬಂದಿದೆ. ತುಳಸಿಯ ಹಿಂದಿನ ಪದ 'ಸುರಸ' ಇರುವಂತೆ ತೆಂಗು ಎನ್ನುವುದರ ಹಿಂದಿನ ರೂಪ 'ಮಾಧೀಫಲ' (ಬೀಜಾಪೂರ) ಆಗಿದೆ. ಈ ತೆಂಗಿಗೆ 'ಬೀಜಾಪೂರ' ಎಂಬ ಇನ್ನೊಂದು ಹೆಸರೂ ಇದೆ. ಅಂತೆಯೇ ದೀಕ್ಷಿತರ 'ವಾತಾಪಿ ಗಣಪತಿಂ ಭಜೇ' ಕೀರ್ತನೆಯಲ್ಲಿ 'ಕರಾಂಕುಶಪಾಶ ಬೀಜಾಪೂರಂ' ಎಂಬ ಪ್ರಯೋಗ ಇದೆ. ಇದು ಸಂಶೋಧನೆಗೆ ಅರ್ಹವಾದ ವಿಷಯ. ಈ ರೀತಿ ಹಳೆ ಸಸಿಗಳು, ಫಲಗಳು ಮರೆಯಾಗಿ ಹೊಸವು ಹುಟ್ಟಿಕೊಳ್ಳುವುದು ಇತಿಹಾಸದ ನೈಜ ವಿಷಯ. ತುಳಸಿಯೂ ಕೂಡ ಹೀಗೇ ಬದಲಾಗಿರಬಹುದು. ಇದು ಬಹುಶಃ ೧೪ ನೇ ಶತಮಾನದ ಸಮಯದಲ್ಲಿ ಆಗಿರಬಹುದು.

ಬರುಬರುತ್ತಾ ತುಳಸಿಯ ಸಸಿಗೆ ಬೇರೆ ಬೇರೆ ದೇವತೆಗಳ ದೇವಿಯರ ಹೆಸರನ್ನು ಸೇರಿಸಲಾಯಿತು. ಇದರ ಪರಿಣಾಮವಾಗಿ ಇಂದು ವಿಷ್ಣು, ರಾಮ, ಹರಿ, ನಾರಾಯಣ, ಲಕ್ಷ್ಮಿ-- ಇತ್ಯಾದಿ ಅನೇಕ ದೇವರುಗಳ ಹೆಸರುಗಳು ತುಳಸೀ ಸಸ್ಯಕ್ಕೆ ಜೋಡಿಸಲಾಗಿದೆ.

## ತುಳಸಿಯ ಹುಟ್ಟು

ತುಳಸಿಯ ಹುಟ್ಟಿನ ಬಗ್ಗೆ ಸ್ಕಂದ ಪುರಾಣದಲ್ಲಿ ಈ ರೀತಿ ಹೇಳಲಾಗಿದೆ --

ಸಮುದ್ರಮಂಥನದ ಸಮಯದಲ್ಲಿ ಅಮೃತವು ಹುಟ್ಟಿತು. ಇದನ್ನು ಪಡೆಯಲು ದೇವಾಸುರರ ನಡುವೆ ಘರ್ಷಣೆ ಉಂಟಾಯಿತು. ಹೀಗೆ ಅಮೃತವನ್ನು ಹಂಚಿಕೊಳ್ಳುವಿಕೆಯ ಸಮಯದಲ್ಲಿ, ಅಮೃತ ಕಳಶವನ್ನು ಜಗ್ಗಾಡಿದ ಸಂದರ್ಭದಲ್ಲಿ ಅಮೃತದ ಕೆಲವು ಬಿಂದುಗಳು ಭೂಮಿಯ ಮೇಲೆ ಬಿದ್ದವು. (ದೇವಾಧಿದೇವತೆಗಳು ಅಮೃತ ಪಾತ್ರೆಯನ್ನು ಜಗ್ಗಾಡಿದಾಗ, ಪಾತ್ರೆ ತುಳುಕಿ ಅದರಿಂದ ಕೆಲವು ಬಿಂದುಗಳು ಭೂಮಿಯ ಬಿದ್ದುವೆಂದು ಕೆಲವರು ಹೇಳುತ್ತಾರೆ. ಅಂತೆಯೆ ಮೋಹಿನಿಯು ದೇವತೆಗಳಿಗೆ ಅಮೃತ ನೀಡಿದಾಗ ಅವರು ಕುಡಿಯುವಾಗ ಕೆಲವು ಬಿಂದುಗಳು ಹಾರಿ ಭೂಮಿಯ ಮೇಲೆ ಬಿದ್ದವು -- ಎಂದೂ ಹೇಳುತ್ತಾರೆ.) ಬಿಂದುಗಳು ಬಿದ್ದ ಸ್ಥಳಗಳಲ್ಲಿ ತುಳಸಿ ಹುಟ್ಟಿತು -- ಎಂದು ಪೌರಾಣಿಕ ಕಥೆಯನ್ನು ಹೇಳುತ್ತಾರೆ. ಆಗ ಬ್ರಹ್ಮನು ಹೀಗೆ ಸೃಷ್ಟಿಯಾದ ಸಸಿಯನ್ನು ವಿಷ್ಣುವಿಗೆ ಅರ್ಪಿಸಿದನಂತೆ.

ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆಂದಿದೆ--

ಸರಾ ಸಾರ್ಯಸ್ಷ ತಾಂ ದೃಷ್ಟ್ವಾ
ತುಲಾನಾಂ ದಾತು ಮಕ್ಷಮಾಃ

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷ ದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸ. ಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ತೇನ ನಾಮ್ನಾ ಚ ತುಲಸೀಂ
ತಾಂ ವದಂತಿ ಪುರಾವಿದಃ
(ಪ್ರಕೃತಿ ಖಂಡ -- ೧೫)

ನರನಾರಿಯರು ಈ ಸಸ್ಯವನ್ನು ನೋಡಿ, ಇದು ಬೇರೆ ಯಾವ ಸಸಿಯೊಂದಿಗೂ ತುಲನೆ ಮಾಡಲು ಸಾಧ್ಯವಿಲ್ಲದ್ದಾದುದರಿಂದ, ಪುರಾತತ್ತ್ವವೇತ್ತರು ಇದನ್ನು ತುಲಸೀ ಎಂದು ಕರೆದರು -- ಎಂದಿದೆ.

ತುಳಸಿಯ ಬಗ್ಗೆ ಕಥೆಗಳನ್ನು ದೇವೀಭಾಗವತದಲ್ಲೂ ಸ್ಕಾಂದಪುರಾಣದಲ್ಲೂ ಕಾಣಬಹುದಾಗಿದೆ.

## ತುಳಸಿಯ ಪ್ರಭೇದಗಳು

'ಲೇಬಿಯೇಟ್' ಎನ್ನುವ ಸಸ್ಯಕುಟುಂಬಕ್ಕೆ ಸೇರಿದ ತುಳಸಿಯು ಸೊಪ್ಪಿನ ವರ್ಗಕ್ಕೆ ಸೇರಿದ ಸಸ್ಯವಾಗಿದೆ. ನಮ್ಮ ದೇಶದ ಮಣ್ಣು, ಹವಾಮಾನ, ವಾಯುಗುಣಗಳು ತುಳಸೀ ಬೆಳೆಯುವಿಕೆಗೆ ತುಂಬಾ ಸೂಕ್ತವಾದುದು. ಇದು ಸಮುದ್ರ ಮಟ್ಟದಿಂದ ೬೦೦೦ ಅಡಿ ಎತ್ತರದ ವರೆವಿಗೂ ಬೆಳೆಯುತ್ತದೆ. ಇದರ ಶಾಸ್ತ್ರೀಯ ಹೆಸರು 'ಓಸಿಮಮ್ ಸ್ಯಾಂಕ್ಟಂ' Ocimum Sanctum (Labiatae) ಅಥವಾ Ocimum Basilicum ಎಂಬುದು. ಭಾರತದಲ್ಲಿ ಅನೇಕ ಬಗೆಯ ತುಳಸಿಗಳಿವೆ---

ಕೃಷ್ಣ (ಕಪ್ಪು) ತುಳಸಿ, ರಾಮ ತುಳಸಿ, ಮುರುಗ ತುಳಸಿ, ಅರಣ್ಯ ತುಳಸಿ, ರಾಜಿ ತುಳಸಿ, ಓಂಕಾರ ತುಳಸಿ, ಬಿಲ್ವಗಂಧ ತುಳಸಿ, ವಿಶ್ವಗಂಧ ತುಳಸಿ, ನ್ಯಾಯ ತುಳಸಿ ಎಂಬ ಪ್ರಕಾರಗಳಿವೆ.

ಇದರ ಮತ್ತೊಂದು ವಿಶೇಷವೆಂದರೆ ಫಲವತ್ತಾದ ಭೂಮಿಯೇ ಇದಕ್ಕೆ ಬೇಕೆಂಬುದಿಲ್ಲ. ಮರುಳು ಮಣ್ಣು (ಮರುಳ್ಗಾಡು) ಹಾಗೂ ವ್ಯವಸಾಯ ಮಾಡದ ಪ್ರದೇಶಗಳಲ್ಲಿಯೂ ಇದು ಬೆಳೆಯುತ್ತದೆ.

ವಿಷ್ಣು ಪೂಜೆಯಲ್ಲಿ ಮುಖ್ಯವಾಗಿ ಕಪ್ಪಗಿರುವ ಕೃಷ್ಣತುಳಸಿ ಹಾಗೂ ಲಘು ಹಸಿರೆಲೆಗಳಿಂದ ಕೂಡಿದ ರಾಮ ತುಳಸಿಯನ್ನು ಹೆಚ್ಚಾಗಿ ಉಪಯೋಗಿಸುವರು.

## ತುಳಸಿಯ ಪ್ರಾಮುಖ್ಯ

ತುಳಸಿಯು ಭಾರತೀಯರೆಲ್ಲರ ಮನೆ, ಮನಗಳನ್ನು ಅಲಂಕರಿಸಿರುವ ಏಕಮೇವ ಸಸ್ಯ. ಇದು ಮನೆಯ ಸೌಭಾಗ್ಯ ಹಾಗೂ ಕಲ್ಪವೃಕ್ಷ. ಸಾಲಿಗ್ರಾಮವು ಪುರುಷರಿಂದ ಪೂಜಿಸಲ್ಪಡುವುದಾದರೆ, ತುಳಸಿಯು ಹೆಚ್ಚಾಗಿ ಸ್ತ್ರೀಯರಿಂದ ಅರ್ಚಿಸಲ್ಪಡುವುದು. ಪ್ರತಿ ಮನೆಯ ಅಂಗಳದಲ್ಲಿರುವ ಈ

ಸಸಿಯು ಸಂಜೀವನಿ ಸಮಾನವಾದುದು. 'ತುಳಸಿ ಗಿಡವಿದ್ದಲ್ಲಿ ಶ್ರೀಹರಿಯು ವಾಸ' ಎನ್ನುವಂತೆ, ಈ ಸಸಿಯು ಇರುವೆಡೆ ಪೂಜಾ ಮಂದಿರವಾಗಿರುತ್ತದೆ. ಶ್ರೀ ವೈಷ್ಣವ, ವೈಷ್ಣವ ದೇವಾಲಯಗಳಲ್ಲಿ ತುಳಸಿಯಿಲ್ಲದೆ ಪೂಜೆಯಿಲ್ಲ, ತೀರ್ಥವಿಲ್ಲ. ಈ ಭಕ್ತರಿಗೆ ತುಳಸೀ ಮಣಿಯು ತುಂಬಾ ಪವಿತ್ರವಾದುದು.

ತುಳಸಿಯು ಬ್ರಹ್ಮಜ್ಞಾನಕ್ಕೆ ಸಮಾನವೆಂದು ಶ್ರೀಮದ್ಭಾಗವತ ತಿಳಿಸುತ್ತದೆ. ಇದನ್ನೇ ಭಗವಾನ್ ಮಧ್ವಾಚಾರ್ಯರು ತಮ್ಮ 'ತಂತ್ರಸಾರ' ಕೃತಿಯಲ್ಲಿ 'ಶ್ರೀಹರಿಗೆ ಅರ್ಪಿತವಾದ ತುಳಸೀ ಸೇವೆಯು ಬ್ರಹ್ಮಜ್ಞಾನ ಸಾಧಕ' ಎಂದು ಅಪ್ಪಣೆ ಕೊಡಿಸಿದ್ದಾರೆ.

ತನ್ನ ತಪಸ್ಸಿನ ಸಮಯದಲ್ಲಿ ಪಾರ್ವತಿಯು ವಿಷ್ಣುಪೂಜೆ ಮಾಡಬೇಕಾಯಿತು. ಹೀಗೆ ಮಾಡಿದುದರಿಂದ ಪಾರ್ವತಿಗೆ 'ಅಪರ್ಣಾ' ಎಂಬ ಹೆಸರು ಬಂದಿತೆಂದು ವಾಯುಪುರಾಣ ತಿಳಿಸುತ್ತದೆ.

'ತುಳಸಿ ದರ್ಶನದಿಂದ ಪಾಪ ಪರಿಹಾರವಾಗುತ್ತದೆಯೆಂದೂ, ಅದರ ಸ್ಪರ್ಶದಿಂದ ಪಾವಿತ್ರ್ಯತೆ ದೊರೆಯುವುದೆಂದೂ, ಅದಕ್ಕೆ ವಂದಿಸುವುದರಿಂದ ರೋಗಗಳು ಪರಿಹಾರವಾಗುವುವೆಂದೂ, ಅದರ ದಳದಿಂದ ತೀರ್ಥವನ್ನು ಪ್ರೋಕ್ಷಣೆ ಮಾಡಿಕೊಳ್ಳುವುದರಿಂದ ಆಯುಸ್ಸು ವೃದ್ಧಿಯಾಗುವುದೆಂದೂ, ತುಳಸಿ ಸಸಿಯನ್ನು ನೆಡುವುದರಿಂದ ಶ್ರೀಮನ್ನಾರಾಯಣನ ಸಾನ್ನಿಧ್ಯದ ಲಾಭವಾಗುವುದೆಂದೂ, ಅದನ್ನು ಅರ್ಚಿಸಿದಲ್ಲಿ ಮೋಕ್ಷ ಪ್ರಾಪ್ತಿಯಾಗುವುದೆಂದೂ' ಪದ್ಮಪುರಾಣವು ತಿಳಿಸುತ್ತದೆ.

ತುಳಸಿಯ ಪಾವಿತ್ರ್ಯ ಹಾಗೂ ಸದ್ಗುಣಗಳಿಗೆ ಸಮಾನವಾದ ಸಸ್ಯವು ಬೇರಾವುದೂ ಇಲ್ಲವೆಂದು ತಿಳಿಸುವ ಋಷಿಮುನಿಗಳು ತುಳಸಿ ತುಲನಾ ನಾಸ್ತಿ, ಅತ ಏವ ತುಳಸಿ -- ಎಂದು ತಿಳಿಸಿದ್ದಾರೆ.

ಮಣಿ ಕಾಂಚನ ಪುಷ್ಪಾಣಿ
ತಥಾ ಮುಕ್ತಾಮಯಾನಿ ಚ
ತುಲಸೀ ದಲ ಪತ್ರಸ್ಯ
ಕಲಾಂ ನಾರ್ಹಂತಿ ಷೋಡಶೀಮ್

ಚಿನ್ನ, ರತ್ನ, ಮುತ್ತುಗಳ ಪುಷ್ಪಗಳಿದ್ದರೂ ಮಹಾವಿಷ್ಣುವಿಗೆ ತೊಡಿಸುವ ತುಳಸೀ ಹಾರದ ಷೋಡಶ ಕಳೆಯು ಬೇರೆ ಯಾವುದಕ್ಕೂ ಬರುವುದಿಲ್ಲ -- ಎಂದು ಪದ್ಮ ಪುರಾಣವು ತಿಳಿಸುತ್ತದೆ.

'ಅಮೃತೋದ್ಭವೆ, ವಿಷ್ಣುವಲ್ಲಭೆ, ನಿನ್ನ ದರ್ಶನ ಮಾತ್ರದಿಂದ ಪಾಪನಾಶ, ಸೇವನೆಯಿಂದ ರೋಗ ನಾಶ, ಪ್ರದಕ್ಷಿಣೆಯಿಂದ ದಾರಿದ್ರ್ಯನಾಶ. ಯಜ್ಞದಾನ, ಜಪ, ದೇವಪೂಜೆ, ಪಿತೃಪೂಜೆಗಳನ್ನು ತುಳಸೀದಳವಿಲ್ಲದೆ ಮಾಡಿದರೆ ಫಲಪ್ರಾಪ್ತಿ ಇಲ್ಲ' -- ಎಂದು ತುಳಸೀ ಉಪನಿಷತ್ತು ತಿಳಿಸುತ್ತದೆ.

ತುಳಸಿಯಿದ್ದ ಮನೆಯು ದೇವಸ್ಥಾನಕ್ಕೆ ಸಮಾನ. ತುಳಸಿ ಪ್ರದಕ್ಷಿಣೆ ತೀರ್ಥಯಾತ್ರೆಗೆ ಸಮಾನ. ತುಳಸಿ ಸಸಿಗಳು ಅಥವಾ ತೋಟಗಳು ಇದ್ದಲ್ಲಿ ಯಮದೂತರು ಪ್ರವೇಶಿಸಲಾರರು. ತುಳಸಿಯನ್ನು ಬೆಳೆಸುವ, ಪೂಜಿಸುವ ಭಕ್ತನಿಗೆ ಯಮದರ್ಶನವಾಗುವುದಿಲ್ಲ ಎಂಬ ನಂಬಿಕೆ ಇದೆ.

ತುಳಸಿ ಸಸಿಯಲ್ಲಿ ಪವಿತ್ರ ಪುಣ್ಯಕ್ಷೇತ್ರಗಳು, ನದಿಗಳು, ತ್ರಿಮೂರ್ತಿಗಳು ಸದಾ ನೆಲೆಸಿರುತ್ತಾರೆಂಬ ನಂಬಿಕೆಯಿದೆ. ಈ ಕಾರಣದಿಂದ ಮೃತನಾಗುವ ವ್ಯಕ್ತಿಯು ಎಷ್ಟೇ ಪಾಪಿಷ್ಟನಾದರೂ, ಅವನ ಮರಣದ ಸಮಯದಲ್ಲಿ ತುಳಸಿಯ (ಒಣಗಿದ್ದಾದರೂ ಸರಿಯೆ) ಗಿಡವನ್ನು ಹೊಸಿಲ ಮೇಲಿಟ್ಟು ಪೂಜಿಸಬೇಕು. ಆ ನಂತರ ಆ ಸಸಿಯಲ್ಲಿನ ಎಲೆಗಳನ್ನು ಸಾಯುವವನ ಹಣೆ, ಕಣ್ಣುಗಳು, ಕಿವಿಗಳು ಹಾಗೂ ಎದೆಯ ಮೇಲೆ ಇಡಬೇಕು. ತುಳಸಿಯ ರೆಂಬೆಯನ್ನು ನೀರಿನಲ್ಲಿ ಮುಳುಗಿಸಿ ಆ ನೀರನ್ನು ತಲೆಯಿಂದ ಕಾಲಿನವರೆಗೆ ಪ್ರೋಕ್ಷಿಸಬೇಕು. ಕಾರ್ಯ ನಡೆಯುತ್ತಿರುವಾಗ ಸಾಯುವವನ ನೆಂಟರಿಷ್ಟರು, ಮಿತ್ರರು, ತುಳಸಿ, ತುಳಸಿ, ತುಳಸಿ ಎನ್ನುವ ಪದವನ್ನು ಎತ್ತರದ ದನಿಯಲ್ಲಿ ಉಚ್ಚರಿಸಬೇಕು. ಆಗ ಮೃತನಾಗುವ ವ್ಯಕ್ತಿಗೆ ತಾನು ಸ್ವರ್ಗಕ್ಕೆ ಹೋಗುವುದಾಗಿ ನಂಬಿ, ಪ್ರಶಾಂತತೆಯಿಂದ ಪ್ರಾಣ ಬಿಡುವನು.

ಇದೇ ರೀತಿಯಲ್ಲಿ ಸಾಯುವಾಗ, ವ್ಯಕ್ತಿಯು ತುಳಸೀ ತೀರ್ಥವನ್ನು ಪಡೆದು, ಅಂತಹವನು ವಿಷ್ಣು ಸಾಯುಜ್ಯವನ್ನು ಪಡೆಯುತ್ತಾನೆ -- ಎಂದು ತುಳಸಿ ಮಹಿಮಾಮೃತ ಎಂಬ ಗ್ರಂಥ ಸಾರುತ್ತದೆ. ಮೃತದೇಹದ ದಹನ ಮಾಡುವಾಗ ಸೌದೆಯ ಜೊತೆಯಲ್ಲಿ ಒಣಗಿದ ಕೆಲವು ತುಳಸಿ ಗಿಡಗಳನ್ನು ಸೇರಿಸಿದಲ್ಲಿ, ಅಂಥ ಮೃತ ವ್ಯಕ್ತಿ ಮೋಕ್ಷವನ್ನು ಪಡೆಯುತ್ತಾನೆ ಎಂದು ನಂಬಲಾಗಿದೆ. ಅಂತಹವನಿಗೆ ಪುನರ್ಜನ್ಮವಿಲ್ಲವೆಂದೂ ನಂಬಲಾಗಿದೆ.

ಈ ಎಲ್ಲ ಭಾವನೆಗಳನ್ನು ಈ ಕೆಳಗೆ ತಿಳಿಸಿರುವ--

ತುಲಸೀ ಕಾನನಂ ಚೈವ
ಗೃಹೇ ಯಸ್ಯಾವ ತಿಷ್ಠತೇ
ತದ್ ಗೃಹಂ ತೀರ್ಥ ಭೂತಂ ಹಿ
ನಾಯಾಂತಿ ಯಮಕಿಂಕರಾಃ

ಎನ್ನುವ ಶ್ಲೋಕವು ಸ್ಪಷ್ಟಪಡಿಸುತ್ತದೆ.

ತುಳಸೀವನ ಇರುವ ಪರಿಸರವು ಶುದ್ಧವಾಗಿರುತ್ತದೆ -- ಎಂದು ನಂಬಲಾಗಿದೆ. ಅದರಿಂದ ವನವನ್ನು ನಿರ್ಮಿಸಲು ಆಗದಿದ್ದಲ್ಲಿ ಬೃಂದಾವನ ಮಾಡಿ, ಅದರಲ್ಲಿ ಒಂದು ತುಳಸಿ ಗಿಡವನ್ನಾದರೂ ನೆಡಲಿ ಎಂದು ಹಿಂದಿನ ಹಿರಿಯರ ಆಸೆ. ಅದರಿಂದಲೇ ಈ ರೀತಿ ಮಾಡುವುದು ಮಂಗಳಕರ ಎಂದು ತಿಳಿಸಿದರು. ಮಹಿಳೆಯರು ಪ್ರತಿದಿನ ಬೃಂದಾವನವನ್ನು ನಿರ್ಮಲವಾಗಿರಿಸಿ. ರಂಗೋಲೆ ಹಾಕಿ, ಪ್ರದಕ್ಷಿಣೆ ಮಾಡುವಂತಹ ಆರೋಗ್ಯಕರ ನಡವಳಿಕೆಯನ್ನು ಹೊಂದಿರುವರು. ತುಳಸಿಯು ಪಾಪನಾಶ ಮಾಡಿ, ಭಾಗ್ಯ ನೀಡುವಳು.

ಪ್ರತಿದಿನ ತುಳಸಿ ಸಸಿಗೆ ಒಂದು ಚೊಂಬು ನೀರು ಹಾಕಿದಲ್ಲಿ, ಅಂತಹ ನೀರು ಹಾಕಿದ ವ್ಯಕ್ತಿಗೆ ಮೋಕ್ಷವು ಲಭಿಸುತ್ತದೆ. ಕಾರ್ತೀಕ ಮಾಸದಲ್ಲಿ ಒಂದು ತುಳಸೀದಳವನ್ನು ಭಗವಂತನಿಗೆ ಅರ್ಪಿಸಿದಲ್ಲಿ, ಸಾವಿರ ಹಸುಗಳನ್ನು ದಾನಮಾಡಿದ ಪುಣ್ಯಕ್ಕೆ ಸಮನಾಗುತ್ತದೆ. ಹೀಗೆ ತುಳಸಿದಳವೊಂದನ್ನು ದಾನ ಮಾಡಿದರೂ ಸಾಕು, ಅರ್ಪಿಸಿದರೂ ಸಾಕು, ಅಂತಹ ವ್ಯಕ್ತಿಯು ಪರಮಾತ್ಮನ ಸಂತೋಷದಲ್ಲಿ ಸಹ ಭಾಗಿಯಾಗುವನೇ ಅಲ್ಲದೆ, ಸ್ವತಃ ಆತನೇ ವಿಷ್ಣುವಾಗುತ್ತಾನೆ.

ತುಳಸಿ ಸಸಿಯನ್ನು ನೆಡುವಿಕೆ, ಅದನ್ನು ಪೋಷಿಸುವಿಕೆಗಳು ಬ್ರಾಹ್ಮಣನ ಒಂದು ಪುಣ್ಯಕಾರ್ಯ. ದೇವಸ್ಥಾನದ ಆವರಣಗಳು, ಧರ್ಮಸತ್ರಗಳ ಆವರಣಗಳಲ್ಲಿ ಇಂತಹ ವನಗಳನ್ನು ಬೆಳೆಸುವುದು ಉಪಕಾರ ಕಾರ್ಯ. ಕಾರ್ತೀಕ ಮಾಸದಲ್ಲಿ ನೀಡುವ ತುಳಸಿದಾನವು ಗೋದಾನಕ್ಕೆ ಸಮಾನವಾಗಿರುತ್ತದೆ. ಆದುದರಿಂದ ಉತ್ತರ ಭಾರತದ ಬೃಂದಾವನ ಪುಣ್ಯಕ್ಷೇತ್ರದ ದೇವಾಲಯಗಳಲ್ಲಿ ಪ್ರಸಾದ ರೂಪವಾಗಿ ತುಳಸಿದಳವನ್ನು ನೀಡಲಾಗುತ್ತದೆ. ತುಳಸೀ ಮಣಿಗಳ ಹಾರವನ್ನು ಧರಿಸಿದವರು ಅಶ್ವಮೇಧ ಯಜ್ಞದ ಪುಣ್ಯವನ್ನು ಪಡೆಯುತ್ತಾರೆ.

ತುಳಸೀ ಮೃತ್ತಿಕೆ (ತುಳಸೀ ಸಸ್ಯವಿರುವ ಮಣ್ಣು) ಪವಿತ್ರವಾದುದಾಗಿದೆ. ಅದನ್ನು ಮೈಗೆ ಬಳಿದುಕೊಂಡಲ್ಲಿ ಯೋಗಿಯ ತರಹದ ದೇಹವಾಗುತ್ತದೆ.

ತುಳಸಿಯು ವಿಷ್ಣುವಿಗೂ, ಶಿವನಿಗೂ ಪ್ರಿಯವೆಂದು ಹೇಳಲಾಗುತ್ತದೆ. ಈ ರೀತಿಯಲ್ಲಿ ಶೈವ, ವೈಷ್ಣವರ ನಡುವೆ ಸಾಮರಸ್ಯ ಬೆಳೆಯಲಿ ಎಂಬುದು ನಮ್ಮ ಹಿರಿಯರ ಆಶೆ.

ತುಳಸಿಯ ದರ್ಶನ, ಸ್ಪರ್ಶ, ಧ್ಯಾನ, ನಮನ, ಪೂಜನ, ಅರ್ಚಣ ಮತ್ತು ಸೇವನಗಳು ಯುಗಯುಗಗಳ ಪಾತಕಗಳನ್ನು ನಾಶಮಾಡುತ್ತದೆ. ತುಳಸೀ ಸಸಿಯಲ್ಲಿ ಅಡಿಯಿಂದ ಮುಡಿಯವರೆಗೆ ಎಲ್ಲ

ದೇವತೆಗಳೂ ವಾಸವಾಗಿರುತ್ತಾರೆ. ಅಂದರೆ ಅದರ ಬೇರುಗಳಲ್ಲಿ ತೀರ್ಥಯಾತ್ರಾಸ್ಥಳಗಳಿದ್ದು, ಮಧ್ಯದಲ್ಲಿ ದೇವಾದಿ ದೇವತೆಗಳೂ, ಮೇಲ್ಭಾಗದ ರೆಂಬೆ ಕೊಂಬೆಗಳಲ್ಲಿ ವೇದಗಳೂ ನೆಲೆಸಿರುತ್ತವೆ ಎಂಬ ನಂಬಿಕೆ ಇದೆ.

## ವೈದ್ಯಕೀಯ ಉಪಯೋಗ

ಈ ಪುಟ್ಟ ಸಸಿಯು ನೂರಾರು ಕಾಯಿಲೆಗಳನ್ನು ಗುಣಪಡಿಸುವ ಶಕ್ತಿಯನ್ನು ಹೊಂದಿದೆ.

ಇದು ವಾತಾಹರ, ವಿಷಹರ.

ಬಾಯಿಯ ದುರ್ಗಂಧವನ್ನು ದೂರಮಾಡಲು, ಸಾಧಾರಣ ನೆಗಡಿ, ಕಫ ಬಾಧೆ, ಕೆಮ್ಮು ಜ್ವರ, ಅಜೀರ್ಣ, ವಿಷಮಜ್ವರಗಳಿಂದ ಹಿಡಿದು ಮೂಲವ್ಯಾಧಿ, ತಲೆ ನೋವು ಪಕ್ಕೆಶೂಲೆ, ಮೊಡವೆ, ಅರಶಿನ ಕಾಮಾಲೆ, ಮೂತ್ರದೋಷ, ದೃಷ್ಟಿದೋಷ, ಕಿವಿ ನೋವು ಮಧುಮೇಹ, ಮಲೇರಿಯಾ, ಸ್ತ್ರೀಯರ ಋತುಚಕ್ರದೋಷಗಳು, ಕಜ್ಜಿ, ಗಾಯ, ಸುಟ್ಟ--ಗಾಯ, ಸಾಂಕ್ರಾಮಿಕ ಕಾಯಿಲೆಗಳು, ಭೇದಿ, ಮೂರ್ಛೆ ಬಂದಾಗ, ಹಾವು-- ಚೇಳು ಕಡಿದವರಿಗೆ ಉಪಶಮನಕ್ಕಾಗಿ, ನೀರಿನ ಶುದ್ಧೀಕರಣಕ್ಕೆ ಹೃದಯರೋಗಕ್ಕೆ ನೆನಪಿನ ಶಕ್ತಿಗೆ, ಹಲ್ಲುನೋವಿಗೆ, ರೋಗ ನಿರೋಧಕಕ್ಕೆ, ಎಲ್ಲ ರೀತಿಯ ಚರ್ಮವ್ಯಾಧಿಗಳಿಗೆ ತುಳಸಿಯು ಸಂಜೀವನಿಯಾಗಿ ಕೆಲಸ ಮಾಡುತ್ತದೆ.

ಇದು ವಿಷಾಣುಗಳನ್ನು ನಾಶಪಡಿಸುವ ಶಕ್ತಿಯನ್ನು ಹೊಂದಿದೆ. ತುಳಸೀವನದಲ್ಲಿ ಉದುರಿದ ತುಳಸೀ ಎಲೆಗಳು ಮಣ್ಣಿನಲ್ಲಿ ಒಂದಾಗಿ ಬಿಡುತ್ತದೆ. ಇಂತಹ ಮಣ್ಣನ್ನು ಮೈಗೆ ಬಳಿದುಕೊಳ್ಳುವುದರಿಂದ ಕುಷ್ಠ ಇತ್ಯಾದಿ ಚರ್ಮರೋಗಗಳು ನಿವಾರಣೆಯಾಗುತ್ತವೆ.

ಈ ಸಸಿಯ ಎಲೆಗಳಲ್ಲಿ ದೇಹದ ಪೋಷಣೆಗೆ ಅಗತ್ಯವಾದ ಇಪ್ಪತ್ತೇಳು ಲೋಹಗಳ ಅಂಶವಿವೆ ಎಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಈ ಸಸಿಯ ಭಾಗಗಳನ್ನು ಉಪಯೋಗಿಸಿಕೊಂಡು ತಯಾರುಮಾಡಿರುವ ಔಷಧಿಗಳ ಸಂಖ್ಯೆ ಸುಮಾರು ಮುನ್ನೂರಕ್ಕು ಹೆಚ್ಚು.

ವೈದ್ಯ ಶಾಸ್ತ್ರಕ್ಕನುಸಾರ ತುಳಸಿ ಗಿಡಗಳು ಇರುವ ಕಡೆ ಸೊಳ್ಳೆಗಳ ಕಾಟವಿಲ್ಲ, ಅಂಟುರೋಗಗಳ ಬಾಧೆಯಿಲ್ಲ.

ಊಟವಾದ ನಂತರ ತುಳಸಿಯ ಕೆಲವು ಎಲೆಗಳನ್ನು ಬಾಯಿಯಲ್ಲಿ ಹಾಕಿಕೊಂಡು ಅಗಿದಲ್ಲಿ ಉತ್ತಮ ಜೀರ್ಣಶಕ್ತಿಯನ್ನು ನೀಡುತ್ತದ. ಸ್ನಾನ ಮಾಡುವುದಕ್ಕೆ ಮುಂಚೆ ಹಾಗೂ ನಂತರದಲ್ಲಿ ಕೆಲವು ತುಳಸಿ ಎಲೆಗಳನ್ನು ಅಗಿದಲ್ಲಿ ಹೊಟ್ಟೆಯ ಉಷ್ಣತೆಯು ಸಮಸ್ಥಿತಿಯಲ್ಲಿದ್ದು, ಶೀತದಿಂದಾಗುವ ಖಾಯಿಲೆಗಳನ್ನು ದೂರಮಾಡುತ್ತದೆ.

ಕೆಲವರು ಆಗುತ್ತಿರುವ ಅಡಿಗೆಯಲ್ಲಿ ತುಳಸಿ ಎಲೆಗಳನ್ನು ಹಾಕಿ ಅಡಿಗೆ ಮಾಡುತ್ತಾರೆ. ಗ್ರಹಣಗಳ ಸಮಯದಲ್ಲಿ ನೀರಿಗೆ ತುಳಸಿ ಎಲೆಗಳನ್ನು ಸೇರಿಸಿದಲ್ಲಿ, ಕೀಟ ನಾಶಕವಾಗಿ ಅದು ವರ್ತಿಸುತ್ತದೆ.

## ವಿದೇಶಗಳಲ್ಲಿ ತುಳಸಿ

ತುಳಸಿಯು ವಿದೇಶಗಳಲ್ಲೂ ಜನಪ್ರಿಯವಾಗಿದೆ. ಇಟಲಿ ದೇಶದಲ್ಲಿ ಪರಸ್ಪರ ಪ್ರೇಮಿಸುವವರಿಗೆ ತುಳಸಿಯು ಅತ್ಯಂತ ಪ್ರಿಯವಾದುದಾಗಿದೆ. ಈ ಎಲೆಗಳನ್ನು ಬಾಯಿಗೆ ಹಾಕಿಕೊಂಡು ಅವರು ವಿನಿಮಯ ಮಾಡಿಕೊಳ್ಳುವರು.

ಗ್ರೀಸ್‌ನಲ್ಲಿ ಈ ಸಸಿಯು ದ್ವೇಷದ ಸಂಕೇತವಾಗಿದೆ. ಗ್ರೀಸ್ ಹಾಗೂ ರೋಂಗಳಲ್ಲಿ ಶಾಪ ಹಾಕುತ್ತಾ ಈ ಸಸಿಯನ್ನು ನೆಡುವರು. ಹಾಗೆ ಮಾಡದಿದ್ದಲ್ಲಿ ಆ ಸಸಿಯು ಬೆಳೆಯುವುದಿಲ್ಲ ಎಂಬುದು ಅವರ ನಂಬಿಕೆಯಾಗಿದೆ.

ಪರ್ಷಿಯಾ ಹಾಗೂ ಈಜಿಪ್ಟ್ ದೇಶಗಳಲ್ಲಿಯೂ ತುಳಸಿಯು ಜನಪ್ರಿಯ. ಮೃತಪಟ್ಟ ವ್ಯಕ್ತಿಗೆ ಸದ್ಗತಿ ದೊರೆಯಲಿ ಎನ್ನುವ ಭಾವನೆಯಿಂದ ಸ್ಮಶಾನಗಳಲ್ಲಿ ಈ ಸಸಿಗಳನ್ನು ಬೆಳೆಯುತ್ತಾರೆ.

ಆಫ್ರಿಕಾ ಖಂಡದ ಅನೇಕ ದೇಶಗಳಲ್ಲಿ ತುಳಸಿಯ ಉಪಯೋಗವಿದೆ. ಚೇಳು ಕಚ್ಚಿದಾಗ, ಅದರ ವಿಷ ದೇಹದಾದ್ಯಂತ ಹರಡದಿರಲು ತುಳಸಿಯ ಎಲೆಗಳನ್ನು ತಿನ್ನಿಸುವರು.

ಗ್ರೀಸ್ ದೇಶದಲ್ಲಿ ಒಂದು ವಿಶೇಷ ಕಥಾನಕವನ್ನು ಹೇಳುವರು -- ಅಂತೆಯೇ ತುಳಸಿಯ ಗುಣಗಾನ ಮಾಡುವ ಹಾಡುಗಳು ಅಲ್ಲಿವೆ. ಇದಕ್ಕೆ ಸಂಬಂಧಪಟ್ಟಂತೆ 'ಸೆನ್ಸ್‌ವೆಲಿಸ್ಟ್' ಎನ್ನುವ ಉತ್ಸವವನ್ನು ಆಚರಿಸಿ, ತುಳಸಿಯನ್ನು ಪ್ರಶಂಸಿಸುವರು. ಇದೇ ರೀತಿಯಲ್ಲಿ ಧಾರ್ಮಿಕ ಪ್ರವೃತ್ತಿಯ ಹೆಂಗಸರು ತುಳಸಿಯ ರೆಂಬೆಯೊಂದನ್ನು ತಂದು ತಮ್ಮ ಮನೆಯ ಅಂಗಳದಲ್ಲಿ ನೆಡುತ್ತಾರೆ. ಈ ಕಾರಣದಿಂದ ಯಾವ ರೋಗಗಳೂ ತಮ್ಮ ಮನೆಯನ್ನು ಪ್ರವೇಶಿಸಲಾರವು ಎಂಬುದು ಅವರ ನಂಬಿಕೆ.

## ಸಂಶೋಧನೆ

ತುಳಸಿ ಸಸ್ಯದ ವೈದ್ಯಕೀಯ ಗುಣಗಳು ಪ್ರಪಂಚದ ಅನೇಕ ದೇಶಗಳ ಗಮನ ಸೆಳೆದಿವೆ. ಅಂತೆಯೇ ತುಳಸಿಯ ಬಗ್ಗೆ ಅನೇಕ ಸಂಶೋಧನೆಗಳನ್ನು ನಡೆಸಿದ್ದಾರೆ. ತುಳಸಿಯು ತನ್ನ ಸುತ್ತಲಿನ ವಾಯುವನ್ನು ಶುದ್ಧಿಗೊಳಿಸುತ್ತದೆ ಎಂಬ ಅಂಶವನ್ನು ಕಂಡು ಹಿಡಿದಿದ್ದಾರೆ. ಕ್ರಿಮಿನಾಶಕ ಪ್ರಭಾವ ಬೀರುತ್ತವೆ -- ಎಂದೂ ಅವರು ತಿಳಿಸಿದ್ದಾರೆ.

ಜಪಾನ್, ಯು.ಎಸ್.ಎ., ಬ್ರಿಟನ್ ಹಾಗೂ ರಷ್ಯಾಗಳಲ್ಲಿ ತುಳಸಿಯನ್ನು ಯಥೇಚ್ಛವಾಗಿ ಬೆಳೆಸಿ, ಅದನ್ನು ಔಷಧಿಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಿದ್ದಾರೆ.

(ಸಂಗ್ರಹ)



## ಮೇಷ

**ಅಶ್ವಿನಿ, ಭರಣಿ, ಕೃತ್ತಿಕೆ 1**

(15 ಏಪ್ರಿಲ್ – 15 ಮೇ)

ಈ ರಾಶಿಯವರಿಗೆ ಈ ವರ್ಷ ಬಹಳ ಉತ್ತಮವಾದ್ದು. ಗ್ರಹಗಳೆಲ್ಲ ಸುಮುಖವಾಗಿವೆ. ಆದರೆ ಅಷ್ಟಮ ಗುರು, ಲಗ್ನ ಸಪ್ತಮದಲ್ಲಿ ರಾಹು ಕೇತುಗಳು, ವರ್ಷದ ಮಧ್ಯದಲ್ಲಿ ಶನಿ ಸ್ವಲ್ಪ ಮಟ್ಟಿಗೆ ಅವರೋಧಗಳನ್ನುಂಟುಮಾಡುತ್ತಾರೆ. ಆದರೂ ಮೂರ್ತಿಬಲ ಚೆನ್ನ, ಹಾಗಾಗಿ ಈ ವರ್ಷ ಮೂರು ಪಾಲು ಶುಭವಾಗಿಯೇ ನಡೆಯುತ್ತದೆ. ಜೂನ್, ಜುಲೈ ತಿಂಗಳುಗಳು ಕಷ್ಟಕಾಲ. ಸೆಪ್ಟಂಬರ್ ನಿಂದ ಮತ್ತೆ ಎಲ್ಲ ವಿಷಯಗಳೂ ಉತ್ತಮಗೊಳ್ಳುತ್ತವೆ. ವಿದ್ಯಾರ್ಥಿಗಳಿಗೆ ಸೆಪ್ಟಂಬರ್ ತಿಂಗಳು ಅನುಕೂಲ ಜಾಸ್ತಿ. ಕೋರ್ಟು ಕಚೇರಿ ವ್ಯವಹಾರಗಳಲ್ಲಿ ನ್ಯಾಯವುಂಟಾಗುತ್ತದೆ. ಉದ್ಯೋಗಿಗಳು, ನ್ಯಾಯವಾದಿಗಳು, ವೈದ್ಯರು ಸಹ ಈ ವರ್ಷ ವೃತ್ತಿಯಲ್ಲಿ ಹೆಚ್ಚು ಕಡಮೆಯಿಲ್ಲದೆ ಮುಂದುವರೆಯಬಲ್ಲರು. ಆಗಾಗ ಪ್ರಯಾಣ ಮಾಡುವವರು ಹೆಚ್ಚು ಜಾಗ್ರತೆಯಾಗಿರಬೇಕು. ವರ್ಷದ ಆರಂಭದ ಪೂರ್ವಭಾಗ ಬಹು ಸಂತೃಪ್ತಿಕರ. ರಾಜಕಾರಣಿಗಳಿಗೆ ಆಶಾಜನಕ. ಆರೋಗ್ಯದ ಬಗ್ಗೆ ಚಿಂತೆಯಿಲ್ಲ. ಕುಟುಂಬದಲ್ಲಿ ಸುಖ ಸಂತೋಷಗಳಿರುತ್ತವೆ. ರಾಹುಕೇತುಗಳಿಗಾಗಿ ಜಪ, ದಾನ ಉತ್ತಮ.

## ವೃಷಭ

**ಕೃತ್ತಿಕೆ 2,3,4, ರೋಹಿಣಿ, ಮೃಗಶಿರ 1,2**

(16 ಮೇ – 15 ಜೂನ್)

ಈ ರಾಶಿಯವರಿಗೆ ಈ ವರ್ಷ ಅಷ್ಟು ಅನುಕೂಲಕರವಾಗಿ ಕಂಡುಬರದು. ವರ್ಷದ ದ್ವಿತೀಯಾರ್ಧದಲ್ಲಿ ಪರಿಸ್ಥಿತಿಗಳು ಸ್ವಲ್ಪ ಸಮತೋಲನಗೊಳ್ಳಬಹುದು. ಆರಂಭದ ಉತ್ಸಾಹ ನಂತರ ತಗ್ಗಿಹೋಗುತ್ತದೆ. ಉದ್ಯೋಗ ವೃತ್ತಿಗಳು ನಿರುತ್ಸಾಹದಿಂದ ನಡೆಯುತ್ತವೆ. ಆದರೂ ವರ್ಗಾವಣೆ ಮೊದಲಾದವು ಇರಬಹುದು. ಯುವಕರಿಗೆ ವಿವಾಹ ಸಂಬಂಧಗಳು ಹೊಂದಿಬರುತ್ತವೆ. ಕೋರ್ಟು ಕಚೇರಿ ವ್ಯವಹಾರಗಳಲ್ಲಿ ಬಹುಮಟ್ಟಿಗೆ ನ್ಯಾಯಸಿದ್ಧಿ. ವರ್ಷದ ಎರಡನೆಯ ಭಾಗದಲ್ಲಿ ಶನಿ ಅನುಕೂಲನಾಗಿರುವನು. ಆಗ ಎಲ್ಲ ಕಾರ್ಯಗಳೂ ನಿರಾತಂಕ ನಡೆಯುತ್ತವೆ. ಈ ರಾಶಿಯ ಉಪಾಧ್ಯಾಯರು, ಕಲಾವಿದರು, ನ್ಯಾಯವಾದಿಗಳು ಕೆಲಮಟ್ಟಿಗೆ ವೃತ್ತಿಯಲ್ಲಿ ಸಂತಸಕರ ಪರಿಸ್ಥಿತಿಗಳನ್ನೇ ಹೊಂದುವರು. ಶನಿಗ್ರಹಕ್ಕೊಂದು ಜಪ, ದಾನಾದಿಗಳು ಸೂಚಿತ.




## ಮಿಥುನ

**ಮೃಗಶಿರ 3,4, ಆರ್ದ್ರಾ, ಪುನರ್ವಸು**

(ಜೂನ್ 16, ಜುಲೈ 15)

ಈ ರಾಶಿಯವರಿಗೆ ಈ ವರ್ಷ ಎರಡು ಪಾಲು ಉತ್ತಮ. ವರ್ಷದ ಎರಡನೆಯಭಾಗ ಮತ್ತೂ ಅನುಕೂಲಕರವಾಗಿ ನಡೆಯುತ್ತದೆ. ವಿದ್ಯಾರ್ಥಿಗಳಿಗೆ ಆತಂಕಗಳು ಹೆಚ್ಚು. ಕ್ರೀಡಾಕಾರರಿಗೆ ತುಸು ಅನುಕೂಲದ ಕಾಲ. ಅಕೌಂಟೆಂಟರು, ಆಡಿಟರ್‌ಗಳು, ಸಾಧಾರಣ ಗುಮಾಸ್ತರು ಬಹು ನಿರುತ್ಸಾಹದಿಂದ ಕಳೆಯುವರು. ಈ ರಾಶಿಯವರಿಗೆ ಈ ವರ್ಷ ಆರೋಗ್ಯದ ಬಗ್ಗೆ ಚಿಂತೆಯೂ ಹೆಚ್ಚಬಹುದು. ಪ್ರಯಾಣಗಳಲ್ಲಿ ಹೆಚ್ಚು ಫಲವಿಲ್ಲ. ಆದರೂ ಶನಿ ಗುರುಗಳ ಅನುಗ್ರಹ ಮೂರ್ತಿವಂತವಾಗಿರುವುದರಿಂದ ಈ ಕಳವಳಗಳು ಹೆಚ್ಚಿಗೆ ಬಾಧಿಸವು. ರಾಹುಕೇತುಗಳು ಸ್ವಲ್ಪ ಒಳಿತು ಸ್ವಲ್ಪ ಕೆಡುಕುಂಟಾಗಿಸುತ್ತ ಅಲ್ಲಿಗಲ್ಲಿಗೆ ಸಮಸಮ. ಸಂತಾನಕ್ಕೆ ಒಳ್ಳೆಯ ಕಾಲವಲ್ಲ. ಕುಟುಂಬದವರಿಗೆ ಆಗಾಗ ಅನಾರೋಗ್ಯವಾದರೂ ಶೀಘ್ರದಲ್ಲಿ ಗುಣ. ಒಟ್ಟಿನಲ್ಲಿ ಈ ವರ್ಷ ಮಿಶ್ರಫಲ.

## ಕರ್ಕಾಟಕ

**ಪುನರ್ವಸು 4, ಪುಷ್ಯ, ಆಶ್ಲೇಷ**

(ಜುಲೈ 16, ಆಗಸ್ಟ್ 16)

ಈ ರಾಶಿಯವರಿಗೆ ಈ ವರ್ಷ ಶನಿಗೋಚಾರ ಅನನುಕೂಲಕರ. ರಾಹು ಕೇತುಗಳೂ ಅನುಕೂಲರೇನಲ್ಲ. ಫಲವಾಗಿ ಈ ವರ್ಷ ಮನೆಯವರ ಆರೋಗ್ಯದ ಬಗ್ಗೆ ಶ್ರದ್ಧೆ ಅತ್ಯಗತ್ಯ. ಕುಟುಂಬದಲ್ಲಿ ಸ್ವಲ್ಪ ಸಿಕ್ಕುಗೊಜಲು ಸಂಭವ. ವಿದ್ಯಾರ್ಥಿಗಳಿಗೆ ಆತಂಕಗಳ ಹೆಚ್ಚೆ ಆದರೂ ಗುರುಬಲದಿಂದ ಸರಿಹೋಗುತ್ತದೆ. ಮಾರ್ಚ್ ಅಷ್ಟು ಅನುಕೂಲವಲ್ಲ. ಉದ್ಯೋಗಿಗಳಿಗೆ ವರ್ಗ, ಪರಿವರ್ತನೆ ಉಂಟಾಗಬಹುದು. ರಾಜಕಾರಣಿಗಳಿಗೆ ಅಷ್ಟೊಂದು ಅನುಕೂಲವಲ್ಲ. ಉಪಾಧ್ಯಾಯರು, ನ್ಯಾಯವಾದಿಗಳು ಲೆಕ್ಕಿಗರು, ಲೆಕ್ಕ ಪರಿಶೋಧಕರು -- ಧನಾದಾಯದಿಂದ ಸಂತೃಪ್ತಿ ಪಡೆಯುವರು. ಹಲವರಿಗೆ ಜೂನ್ ಜುಲೈ ನಂತರ ಒಳಿತು. ವರ್ಷಾಂತ್ಯದ ವೇಳೆಗೆ ಪರಿಸ್ಥಿತಿ ಸರಿಹೋಗುವುದು. ಗೊಂದಲ, ಗೊಜಲುಗಳು ತೊಲಗುತ್ತವೆ. ಯುವಕರಿಗೆ ವಿವಾಹ ಪ್ರಯತ್ನ ಪ್ರಯೋಜನಕಾರಿ ಅಲ್ಲ. ನವಂಬರ್, ಡಿಸೆಂಬರ್ ವರೆಗೆ ಅಡ್ಡಿಗಳುಂಟಾಗುತ್ತಲೇ ಇರುತ್ತವೆ. ಒಟ್ಟಿನಲ್ಲಿ ಈ ಸಂವತ್ಸರ ಆಶಾದಾಯಕ ಅಲ್ಲ. ಶನಿ, ರಾಹುಕೇತುಗಳಿಗೆ ಜಪ, ದಾನ ಮಾಡುವುದು ಅಗತ್ಯ.

## ಸಿಂಹ

**ಮಖಾ, ಪುಬ್ಬಾ, ಉತ್ತರ 1,**

(ಆಗಸ್ಟ್ 17, ಸೆಪ್ಟಂಬರ್ 16)

ಈ ರಾಶಿಯವರಿಗೆ ಈ ವರ್ಷ ಶುಭಾಶುಭ ಮಿಶ್ರಮವಾಗಿ ನಡೆಯುತ್ತದೆ. ಸಮಯಕ್ಕೆ ಸರಿಯಾಗಿ

ಧನಸಹಾಯ, ಬಂಧುಮಿತ್ರರ ನೆರವು ದೊರೆಯುವುದು. ಮನೆಯಲ್ಲಿ ಶ್ರೀಮತಿಯವರ ಆರೋಗ್ಯ ತುಸು ತೊಂದರೆ ನೀಡಬಹುದು. ಕೋರ್ಟುಕಚೇರಿ ವ್ಯವಹಾರಗಳಲ್ಲಿ ಅನುಕೂಲವಿರದು. ಉದ್ಯೋಗಿಗಳಿಗೆ ಕಾಲ ಚೆನ್ನಾಗಿ ಕಳೆಯುತ್ತವೆ. ಪೋಲೀಸು, ಮಿಲಿಟರಿ, ವೈದ್ಯ ವೃತ್ತಿಗಳವರಿಗೆ ಕೆಲಸದ ಒತ್ತಡ ಅಧಿಕವಾಗುವುದು. ರಾಜಕಾರಣಿಗಳಿಗೆ ಪ್ರತಿಕೂಲಗಳು ಹೆಚ್ಚು, ಆದರೆ ಸಮಾಜದ ಆದರಣೆ ಉಂಟು. ವಿದ್ಯಾರ್ಥಿಗಳಿಗೆ ಈ ವರ್ಷ ಬಹುಮಟ್ಟಿಗೆ ಅನುಕೂಲಕರ. ಪರೀಕ್ಷೆಗಳಲ್ಲಿ ಜಯವುಂಟಾಗಬಹುದು. ಸ್ತ್ರೀಯರಿಗೆ ಈ ವರ್ಷ ನಿರರ್ಥಕ. ಧನಾದಾಯವಿದ್ದರೂ ಗೃಹ ಕಲಹ, ಅನಾರೋಗ್ಯವಿರುವುದು. ಪ್ರಯಾಣ ಕಡಮೆ, ಆದರೆ ಪ್ರಮಾದಭಯ ಹೆಚ್ಚು. ಸಂತಾನಕ್ಕೆ ಈ ವರ್ಷ ಬಹುತೇಕ ಅನುಕೂಲ. ಒಟ್ಟಿನಲ್ಲಿ ಈ ವರ್ಷದಲ್ಲಿ ಮೇಲು ಕೀಳುಗಳೆರಡೂ ಅನುಭವಕ್ಕೆ ಬರುತ್ತವೆ.

## ಕನ್ಯಾ

**ಉತ್ತರ 2,3,4, ಹಸ್ತ, ಚಿತ್ತ 1,2**

**(ಸೆಪ್ಟಂಬರ್ 16, ಅಕ್ಟೋಬರ್ 16)**

ಈ ರಾಶಿಯವರಿಗೆ ವರ್ಷದಲ್ಲಿ ಎರಡು ಪಾಲು ಶುಭವಾಗಿ ಸುಮುಖವಾಗಿ ಸಾಗುತ್ತದೆ. ವ್ಯವಹಾರದಲ್ಲಿ ಕಾರ್ಯಸಿದ್ಧಿ, ಸಂತೋಷ ಲಭ್ಯ, ವ್ಯಾಪಾರದಲ್ಲಿ ಮೋಸಹೋಗದಂತೆ ಎಚ್ಚರಿಕೆ ಇರಬೇಕು. ಧನಾದಾಯ ಚೆನ್ನಾಗಿದ್ದರೂ, ಅಧಿಕ ವೆಚ್ಚ, ಅನವಶ್ಯಕ ಅಡೆತಡೆಗಳುಂಟಾಗಬಹುದು. ಸಟ್ಟಾವ್ಯಾಪಾರಾದಿಗಳಲ್ಲಿ ಸ್ವಲ್ಪ ಮಟ್ಟಿಗಿನ ಲಾಭವಿದೆ. ಜೂನ್ ತಿಂಗಳ ನಂತರ ಕಾಲ ಬಹುತೇಕ ಅನುಕೂಲಕರ. ಸಂವತ್ಸರ ಮಧ್ಯಕಾಲದಲ್ಲಿ ಉದ್ಯೋಗಿಗಳಿಗೆ ಅನುಕೂಲ ಪರಿಸ್ಥಿತಿ ಏರ್ಪಡುವುದು. ಪುಣ್ಯಯಾತ್ರಾ ಪ್ರಯತ್ನಗಳೂ ನಡೆಯಬಹುದು. ವರ್ಷದ ಕೊನೆಯಲ್ಲಿ ಮನೆಯ ಪರಿಸ್ಥಿತಿಗಳು ತುಸು ಗಂಭೀರವೇ ಆದರೂ ಎಲ್ಲವೂ ಶುಭದಲ್ಲಿ ಪರಿಣಮಿಸುವುವು. ಒಟ್ಟಿನಲ್ಲಿ ಈ ಸಂವತ್ಸರ ಶುಭಾಶುಭ ಮಿಶ್ರಫಲ. ವಿದ್ಯೆ ವ್ಯಾಸಂಗದಲ್ಲಿರುವವರಿಗೆ ಇದು ಒಳ್ಳೆಯ ಕಾಲ.

## ತುಲಾ

**ಚಿತ್ತ 3,4, ಸ್ವಾತಿ, ವಿಶಾಖ 1,2,3**

**(ಅಕ್ಟೋಬರ್ 17, ನವಂಬರ್ 15)**

ಈ ರಾಶಿಯವರಿಗೆ ರಾಹುಕೇತುಗಳ ಹೊರತು ಮಿಕ್ಕ ಗ್ರಹಗಳು ಅನುಕೂಲಕರ. ಧನಾಭಿವೃದ್ಧಿ, ವ್ಯವಹಾರ ಜಯ, ಮನೋಲ್ಲಾಸ, ಶುಭಕಾರ್ಯ ಪ್ರಯತ್ನ ಕಾರ್ಯಸಿದ್ಧಿ ಮೊದಲಾದ ಶುಭಫಲಗಳು ಕಂಡುಬರುತ್ತವೆ. ಅತ್ಯಂತವಾಗಿ ಅಲ್ಲದಿದ್ದರೂ ಶನಿ ಮಧ್ಯಕಾಲದಲ್ಲಿ ಯೋಗದಾಯಕನಾಗಿ ಎಲ್ಲದರಲ್ಲೂ ಜಯಲಾಭಗಳನ್ನುಂಟುಮಾಡುತ್ತಾನೆ. ಜೂನ್, ಜುಲೈ ತಿಂಗಳು ಒಳ್ಳೆಯವು. ಸ್ವಶರೀರಾರೋಗ್ಯ ಸರಿಹೋಗುವುದು. ಮನೆಯವರ ಬಗ್ಗೆ ಆತಂಕವಿಲ್ಲ. ಉದ್ಯೋಗಸ್ಥರಿಗೆ ಒಳ್ಳೆಯ ಕಾಲ. ರಾಜಕಾರಣಿಗಳಿಗೆ ಆಶಾಜನಕ. ಅವರು ಎಲ್ಲ ಕಡೆಯಿಂದ ಗೌರವಾದರ, ಕೀರ್ತಿಪ್ರಸಿದ್ಧಿ, ಸ್ವಶಕ್ತಿಯ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಬಲ್ಲರು. ವ್ಯಾಪಾರಿಗಳಿಗೆ ಸಾಮಾನ್ಯ ಕೋರ್ಟು ಕಚೇರಿಗಳಲ್ಲಿ ಒಂದು ವಿಧವಾದ ಅನುಕೂಲವುಂಟಾಗಿ ಮನಃಶಾಂತಿ ಲಭ್ಯವಾಗುತ್ತದೆ. ಒಟ್ಟಿನಲ್ಲಿ ಈ ರಾಶಿಯವರಿಗೆ ವರ್ಷದಲ್ಲಿ ಎರಡುಪಾಲು ಶುಭಫಲ ಕಂಡುಬರುತ್ತದೆ. ಆತಂಕ ಹೆಚ್ಚಿದ್ದರೂ ಸುಖಶಾಂತಿಗಳಿಗೆ ಲೋಪವಿಲ್ಲ.

## ವೃಶ್ಚಿಕ

**ವಿಶಾಖ 4, ಅನೂರಾಧ, ಜ್ಯೇಷ್ಠಾ**

**(ನವಂಬರ್ 16, ಡಿಸೆಂಬರ್ 15)**

ಈ ವರ್ಷ ಈ ರಾಶಿಯವರಿಗೆ ಕೆಲವು ಬಗೆಯಲ್ಲಿ ಅನುಕೂಲಕರವಾಗಿ ತೋರುತ್ತದೆ. ಆರೋಗ್ಯ ಚೆನ್ನಾಗಿರುತ್ತದೆ. ವೃತ್ತಿಯಲ್ಲಿ ಅನುಕೂಲ ಸಿದ್ಧಿಸುತ್ತದೆ. ಗೃಹ ಕಲಹ, ಅನಾರೋಗ್ಯಗಳು ತಂತಾವೆ ಸರಿಹೊಂದುತ್ತವೆ. ಆದರೆ ಮೂರ್ತಿ ರೂಪದಲ್ಲಿ ನೋಡಿದರೆ ಯಾವ ಗ್ರಹವೂ ಅನುಕೂಲವಾಗಿಲ್ಲ. ಹೀಗಾಗಿ ಯಾವುದರಿಂದಲೂ ದೊಡ್ಡ ಲಾಭ ಎಂಬುದೇನಿಲ್ಲ. ಕೆಲಸಗಳು ಅರ್ಧಂಬರ್ಧ ಪೂರ್ತಿಯಾದಂತೆ ಇರುತ್ತವೆ. ಯಾತ್ರೆ ಹೆಚ್ಚಿ ವೆಚ್ಚ ಹೆಚ್ಚುತ್ತದೆ. ಆಧ್ಯಾತ್ಮಿಕ ಪ್ರಗತಿ ಸಾಧಿಸಲು ಅನುಕೂಲವಾದ ಕಾಲ. ಕುಜ ಸಂಚಾರದಿಂದಾಗಿ ಧೈರ್ಯ, ಸಾಹಸ, ಜಯಗಳು ಸೂಚಿತ. ಆದರೆ ವ್ಯರ್ಥ ತಿರುಗಾಟ, ವೆಚ್ಚ, ಜಂಜಡಗಳುಂಟಾಗುತ್ತವೆ. ಶನಿಪ್ರಭಾವದಿಂದ ಕಾಲಹರಣವಾಗಿ ಪ್ರತಿಯೊಂದು ಕೆಲಸವೂ ಮಂದಗತಿಯಲ್ಲಿ ಸಾಗಿ ಬೇಸರ ಬರಿಸುವುವು. ಜೂನ್ ಜುಲೈ ತಿಂಗಳು ವ್ಯವಹಾರ ಜಯ. ವೈದ್ಯ ಆರೋಗ್ಯ ವೃತ್ತಿಯಲ್ಲಿರುವವರಿಗೆ ಲಾಭದಾಯಕ. ಉದ್ಯೋಗಿಗಳಿಗೆ ಜಂಜಾಟ ಜಾಸ್ತಿ. ಆದರೂ ಯಾವುದೋ ರೀತಿಯಲ್ಲಿ ಹೊಂದಿಕೊಂಡು ನಡೆಯುತ್ತವೆ. ಶನಿ ಕುಜರಿಗೆ ಜಪ, ದಾನಗಳನ್ನು ನಡೆಸುವುದು ಉತ್ತಮ.

## ಧನುಸ್

**ಮೂಲ, ಪೂರ್ವಾಷಾಢ, ಉತ್ತರಾಷಾಢ 1**

**(ಡಿಸೆಂಬರ್ 16, ಜನವರಿ 15)**

ಈ ರಾಶಿಯವರಿಗೆ ಈ ವರ್ಷ ಖರ್ಚು ಪ್ರಯಾಣ ಅಧಿಕ. ವರ್ಷದ ಮಧ್ಯಕಾಲದಲ್ಲಿ ಈ ಚಿಂತೆ ಹೆಚ್ಚೆಗೆ ಕಂಡುಬರುತ್ತದೆ. ಮನೆ ಬಿಟ್ಟು ಹೊರಗೆ ನಿಲ್ಲುವ ದಿನಗಳು ಹೆಚ್ಚು ಆದಂತೆ ಕಂಡುಬರುತ್ತವೆ. ಕುಟುಂಬದವರಿಗೆ, ಇಷ್ಟ ಮಿತ್ರ ಸಹೋದ್ಯೋಗಿಗಳಿಗೆ ಬಹಳ ಉಪಕಾರಿ ಆಗಿರುತ್ತದೆ. ಕ್ರೀಡಾಕಾರರಿಗೆ ಮಿಶ್ರ ಫಲದಾಯಕ. ವಿದ್ಯಾರ್ಥಿಗಳಿಗೆ ಅನುಕೂಲಕಾಲವಿಲ್ಲ. ಪೋಲೀಸರಿಗೆ ಮಿಲಿಟರಿ ಉದ್ಯೋಗಿಗಳಿಗೆ ವರ್ಗ ಗಳಿರುತ್ತವೆ. ವೈದ್ಯರಿಗೆ ತುಸು ಉತ್ತಮ. ಶುಭಕಾರ್ಯ ಪ್ರಯತ್ನಕ್ಕೆ ಶುಭ ವೆಚ್ಚಗಳಿಗೆ ಪುಣ್ಯಯಾತ್ರೆಗಳಿಗೆ ಇದು ಉತ್ತಮ ಕಾಲ. ಆರೋಗ್ಯದ ತೊಂದರೆಯಿರದು. ಆದರೆ ವರ್ಷದ ಮಧ್ಯದಲ್ಲಿ ಜೂನ್, ಜುಲೈಗಳಲ್ಲಿ ಮನೆಯವರ ಆರೋಗ್ಯದ ಬಗ್ಗೆ ಶ್ರದ್ಧೆ ವಹಿಸಬೇಕಾಗಿ ಬರುತ್ತದೆ. ಪ್ರಯಾಣದಲ್ಲಿಯೂ, ಕಚೇರಿಯಲ್ಲಿಯೂ ಬಹಳ ಜಾಗರೂಕತೆಯಿಂದ ಇರಬೇಕು. ಒಟ್ಟಿನಲ್ಲಿ ಈ ರಾಶಿಯವರಿಗೆ ಈ ವರ್ಷ ಮಿಶ್ರಫಲಗಳುಂಟಾಗುತ್ತವೆ.

## ಮಕರ

**ಉತ್ತರಾಷಾಢ 2,3,4, ಶ್ರವಣ, ಧನಿಷ್ಠ 1,2**

**(ಜನವರಿ 16, ಫೆಬ್ರವರಿ 13)**

ಮಕರರಾಶಿಯವರಿಗ ಈ ವರ್ಷ ಮಧ್ಯಮರೂಪದಲ್ಲಿ ಎಂದರೆ ಶುಭಾಶುಭ ಮಿಶ್ರಮವಾಗಿರುತ್ತದೆ. ಧನಾದಾಯ ಚೆನ್ನಾಗಿರುತ್ತದೆ. ಆರೋಗ್ಯವೂ ತೊಂದರೆಯಿಲ್ಲ. ವ್ಯವಹಾರದಲ್ಲಿ ಮಾತ್ರ ಎಚ್ಚರಿಕೆಯಿಂದಿರಬೇಕು. ಹಟ, ಜಗಳ, ಪ್ರಮಾದಗಳೂ ಉಂಟು. ಉದ್ಯೋಗ ವೃತ್ತಿಗಳಲ್ಲಿ ಒಮ್ಮೊಮ್ಮೆ ಮಹಾವೇಗವೂ ಕೆಲವೊಮ್ಮೆ ವೇಗವೂ ಉಂಟು. ಇದರಿಂದಾಗಿ ಅಸ್ಥಿರತೆ ಆದರೂ ಮಾನ ಮರ್ಯಾದೆಗಳಿಗೆ ಭಂಗವಿಲ್ಲ. ವರ್ಷದ ಮಧ್ಯಭಾಗದಲ್ಲಿ ಶನಿಯೂ ಕೆಲಮಟ್ಟಿಗೆ ಸಹಾಯಕನಾಗಿ ಧನಾದಾಯ, ವ್ಯವಹಾರಜಯ, ಬಂಧು ಸಹಾಯಗಳನ್ನುಂಟುಮಾಡುವನು. ಮನೆಯವರಿಗೆ ಆಗಾಗ ಆರೋಗ್ಯರೀತ್ಯಾ ತೊಂದರೆಗಳು. ಆದರೆ ಅವು ಅಷ್ಟಾಗಿ ಬಾಧಿಸವು. ಪ್ರಯಾಣದಲ್ಲಿ ಪ್ರಮಾದ ಸೂಚನೆಗಳಿವೆ. ಸ್ತ್ರೀಯ ಆರೋಗ್ಯ ಸ್ವಲ್ಪ ಸೂಕ್ಷ್ಮ ಆಗಬಹುದು. ನ್ಯಾಯವಾದಿ, ಉಪಾಧ್ಯಾಯ, ಬ್ಯಾಂಕು ಉದ್ಯೋಗಿಗಳು, ಜೀವವಿಮೆಯವರು ಈ ವರ್ಷ ಅಭಿವೃದ್ಧಿ ಹೊಂದುವರು. ವಿದ್ಯಾರ್ಥಿಗಳು ಸಾಮಾನ್ಯ ಪ್ರಗತಿ ತೋರುವರು. ಈ ವರ್ಷ ಒಟ್ಟಿನಲ್ಲಿ ಮಿಶ್ರಫಲದಿಂದ ನಡೆಯುವುದು.

## ಕುಂಭ

**ಧನಿಷ್ಠ 3,4, ಶತಭಿಷ, ಪೂರ್ವಾಭಾದ್ರ 1,2,3**

**(ಫೆಬ್ರವರಿ 14, ಮಾರ್ಚಿ 14)**

(40 ನೇ ಪುಟ ನೋಡಿ)

# ವಾರ್ತಾಲಹರಿ

## ಸ್ವಾಮಿಗೆ ಬೆಳ್ಳಿಯ ಪಾತ್ರೆ ಕಾಣಿಕೆ

ಸ್ವಾಮಿ ಭಕ್ತರೊಬ್ಬರು ನವಂಬರ್ 20 ರಂದು ಸ್ವಾಮಿಯ ಸೇವೆಗೆಂದು ಎರಡು ಬೆಳ್ಳಿಯ ಗಂಗಾಳಗಳನ್ನು ಸಮರ್ಪಿಸಿದ್ದಾರೆ. ಕಲ್ಕತ್ತೆಯ ಪ್ರಮುಖ ವ್ಯಾಪಾರಿಗಳಾದ ಶ್ರೀ ಬಿ. ಎಂ. ಖೈತಾನ್ ಅವರು 3.3 ಲಕ್ಷ ರೂಪಾಯಿ ಬೆಲೆಯ 36 ಕಿಲೋಗ್ರಾಂ ತೂಕದ ಈ ಗಂಗಾಳಗಳನ್ನು ತಿ.ತಿ.ದೇ. ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಅವರಿಗೆ ನೀಡಿದರು. ತಿ.ತಿ.ದೇ. ಪರವಾಗಿ ಪಾತ್ರೆಗಳನ್ನು ಸ್ವೀಕರಿಸಿದ ಅವರು ಈ ಪಾತ್ರೆಗಳನ್ನು ಸ್ವಾಮಿಯ ಅಭಿಷೇಕದ ಹಾಲನ್ನು ಸಂಗ್ರಹಿಸಿಡಲೂ, ಸಹಸ್ರ ಕಳಶಾಭಿಷೇಕದ ತೀರ್ಥ ಸಂಗ್ರಹಕ್ಕೂ ಬಳಸಲಾಗುವುದೆಂದು ತಿಳಿಸಿದ್ದಾರೆ.

## ಸ್ವಾಮಿಗೆ ಹೀರೊ ಹೊಂಡಾ ಕಾಣಿಕೆ

ಹೀರೊ ಹೊಂಡಾ ಮೋಟಾರ್ ಸೈಕಲ್ ಸಂಸ್ಥೆ ತಮ್ಮ ಹತ್ತು ಲಕ್ಷದ ಒಂದನೇ ಮೋಟಾರ್ ಸೈಕಲ್ ಅನ್ನು ನವಂಬರ್ 10 ರ ಶನಿವಾರ ಸ್ವಾಮಿಗೆ ಸಮರ್ಪಿಸಿದ್ದಾರೆ. ಹೀರೊ ಹೊಂಡಾ ಕಂಪನಿಯವರು ತಮ್ಮ ಮೊದಲ ಉತ್ಪತ್ತಿಯನ್ನು ಸ್ವಾಮಿಗೆ ಸಮರ್ಪಿಸಿದ ಕಾರಣದಿಂದಾಗಿ ತಮ್ಮ ಉತ್ಪಾದನೆಯ ಮಾರಾಟ ಬಹಳ ಚೆನ್ನಾಗಿ ನಡೆಯುತ್ತಿದೆಯೆಂದು ಭಾವಿಸಿ, ಆಗ ನೀಡಿದ ವಾಹನವನ್ನು ಹಿಂದಕ್ಕೆ ಪಡೆದು ಹತ್ತು ಲಕ್ಷದ ಒಂದನೇ ವಾಹನವನ್ನು ಹೊಸದಾಗಿ ನೀಡಿದ್ದಾರೆ.

## ಸ್ವಾಮಿ ಸೇವೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಕೋಟ್ಲ ವಿಜಯಭಾಸ್ಕರರೆಡ್ಡಿಯವರು ನವಂಬರ್ 27 ನೇ ತಾರೀಖು ಭಾನುವಾರ ಸ್ವಾಮಿಯನ್ನು ಸಂದರ್ಶಿಸಲು ತಿರುಮಲೆಗೆ ಆಗಮಿಸಿದರು. ಅವರಿಗೆ ತಿರುಮಲೆಯಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಜೆ.ಇ.ಓ. ಸತ್ಯನಾರಾಯಣ ಮೊದಲಾದವರು ಸ್ವಾಗತ ನೀಡಿದರು. ಆಲಯದ ಬಳಿ ಮಧ್ಯಾಹ್ನ 1.30 ಕ್ಕೆ ಕಾರ್ಯನಿರ್ವಹಣಾಧಿಕಾರಿ, ಜೆ.ಇ.ಓ., ಸ್ಪೆಷಲ್‌ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್, ಎಸ್.ಓ. ಶ್ರೀ ಎಸ್. ಎಲ್. ವಿ. ನಾರಾಯಣ, ವಿಜಿಲೆನ್ಸ್ ಎಸ್.ಓ. ಶ್ರೀ ಜನಾರ್ದನ ನಾಯುಡು ಮೊದಲಾದವರು ಸ್ವಾಗತ ನೀಡಿದರು.

ಸ್ವಾಮಿ ಸನ್ನಿಧಿಯಲ್ಲಿ ಮುಖ್ಯಮಂತ್ರಿಗಳಿಗೆ ಸ್ವಾಮಿ ವೈಭವವನ್ನು ಕುರಿತು ಹೇಳಲಾಯಿತು. ಅವರಿಗೆ ಮೇಲ್‌ಚಾತ್ ವಸ್ತ್ರ ಬಹುಮಾನ ನೀಡಲಾಯಿತು. ನಂತರ ಅವರು ಹುಂಡಿಯಲ್ಲಿ ಕಾಣಿಕೆಯನ್ನು ಸಮರ್ಪಿಸಿದರು. ರಂಗನಾಯಕ ಮಂಟಪದಲ್ಲಿ ಶ್ರೀಯುತರಿಗೆ ವೇದಾಶೀರ್ವಾದವನ್ನು ನೀಡಿದರು. ಪ್ರಸಾದವನ್ನೂ ನೀಡಲಾಯಿತು.

## ತಿರುಪತಿಯಲ್ಲಿ ಹೆಚ್ಚಿದ ಬಸ್ ಸೌಕರ್ಯಗಳು

ದಿನೇ ದಿನೇ ಹೆಚ್ಚುತ್ತಿರುವ ತಿರುಪತಿಯ ಯಾತ್ರಿಕ ಸಂದಣಿಗೆ ಅನುಕೂಲವಾಗಿ ತಿರುಪತಿಯಲ್ಲಿ ಬಸ್ ಸೌಲಭ್ಯಗಳನ್ನು ಹೆಚ್ಚುಗೊಳಿಸಲಾಗಿದೆ. ತಿರುಪತಿಯ ಕೇಂದ್ರ ಬಸ್ ನಿಲ್ದಾಣವನ್ನು ವಿಸ್ತರಿಸಿ ಹೆಚ್ಚಿನ ಬಸ್‌ಗಳು ನಿಲ್ಲಲು ಹಾಗೂ ಯಾತ್ರಿಕರ ನೆರಳುಗಳನ್ನು ಕಲ್ಪಿಸಲಾಗಿದೆ. ಬೆಟ್ಟದ ಮೇಲಕ್ಕೆ ಹೋಗಿ ಬರಲು ಶ್ರೀನಿವಾಸ ಬಸ್ ನಿಲ್ದಾಣ, ಶ್ರೀ ಪದ್ಮಾವತೀ ಬಸ್ ನಿಲ್ದಾಣ, ಅಲಿಪಿರಿ ಬಸ್ ನಿಲ್ದಾಣ

## ಪೆದ್ದ ಜೀಯರ್ ನಿರ್ಯಾಣ



ತಿರುಮಲೆ ತಿರುಪತಿ ದೇವಸ್ಥಾನಗಳ ಧರ್ಮಕರ್ತರು ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಪೆರಿಯಕೋಯಿಲ್ ಕೆಳ್ವಿ ಅಪ್ಪನ್ ಶ್ರೀ ಗೋವಿಂದ ರಾಮಾನುಜ ಪೆದ್ದ ಜೀಯರ್ ಅವರು ನವಂಬರ್ 19 ರಂದು ಶನಿವಾರ ಮಧ್ಯಾಹ್ನ 11.25 ಗಂಟೆಗೆ ಮದರಾಸಿನಲ್ಲಿ ನಿರ್ಯಾಣ ಹೊಂದಿದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ಅರವತ್ತೂರು ವರ್ಷದ ಪೆದ್ದ ಜೀಯರ್ ಸ್ವಾಮಿಗಳು ಶ್ರೀರಂಗದಲ್ಲಿ ಜನಿಸಿ, ತಿರುಪತಿಯ ಮಠಾಧೀಶರಾಗಿದ್ದರು. ಅವರ ಭೌತಿಕ ಕಾಯವನ್ನು ತಿರುಪತಿಗೆ ತಂದು ಭಾನುವಾರದಂದು ತಿರುಪತಿಯ ಶ್ರೀ ವರದರಾಜಸ್ವಾಮಿ ದೇವಾಲಯದಲ್ಲಿ ವೈಷ್ಣವಾಚಾರ್ಯ ಸಂಪ್ರದಾಯದಲ್ಲಿ ಅಂತ್ಯಕ್ರಿಯೆಗಳನ್ನು ನಡೆಸಲಾಯಿತು. ಶ್ರೀ ಪೆರಿಯಕೋಯಿಲ್ ಕೆಳ್ವಿ ಅಪ್ಪನ್ ತಿರುವೆಂಗಡ ರಾಮಾನುಜ ಚಿನ್ನ ಜೀಯರ್, ಶ್ರೀ ಶ್ರೀ ತ್ರಿದಂಡಿ ಶ್ರೀಮನ್ನಾರಾಯಣ ರಾಮಾನುಜ ಜೀಯರ್ (ಚಿನ್ನ ಜೀಯರ್) ಶ್ರೀ ಪೆರಂಬುದೂರು ಶ್ರೀ ಯತಿರಾಜ ಜೀಯರ್ ಮೊದಲಾದ ಹಿರಿಯರು ಭಾಗವಹಿಸಿ ಸ್ವಾಮಿಗಳಿಗೆ ವಿದಾಯ ಹೇಳಿದರು.

ಪೆದ್ದ ಜೀಯರ್ ಸ್ವಾಮಿಗಳು ತಿರುಪತಿ ತಿರುಮಲೆಗಳಲ್ಲಿ ಭಕ್ತ ಯಾತ್ರಿಕರಿಗೆ ಮಾರ್ಗದರ್ಶಕರಾಗಿ, ಶ್ರೀನಿವಾಸನ ಅಂತರಂಗ ಭಕ್ತರಾಗಿ ತಿರುಮಲೆಯಲ್ಲಿ ನಡೆದ ಯಾಗಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತ ಉತ್ಸವಗಳಲ್ಲಿ ಉತ್ಸಾಹದ ಸೆಲೆಯಾಗಿ ಯುವಕರನ್ನೂ, ಅಧಿಕಾರಿ, ಭಕ್ತರನ್ನು ಉತ್ತೇಜಗೊಳಿಸುತ್ತ ಧರ್ಮ ಪ್ರವಚನಾಚಾರ್ಯರಾಗಿಯೂ ಪ್ರಸಿದ್ಧರಾಗಿದ್ದರೂ ತಮ್ಮ ಸಜ್ಜನಿಕೆ, ಸೌಜನ್ಯಗಳಿಂದಾಗಿ ಎಲ್ಲರಿಗೆ ಗುರುಗಳಾಗಿದ್ದರು.

ಅವರ ನೆನಪಿನಲ್ಲಿ ಸಪ್ತಗಿರಿ ವಂದಿಸುತ್ತದೆ -- ಸಂ



## ಸಪ್ತಗಿರಿಯ ನೂತನ ಸಂಪಾದಕರು

ಇಷ್ಟು ದಿನವೂ ಸಪ್ತಗಿರಿಯಲ್ಲಿ ತಮಿಳು ಭಾಷಾ ಉಪಸಂಪಾದಕರಾಗಿಯೂ, ಪ್ರಭಾರ ಸಂಪಾದಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎನ್. ಎಸ್. ರಾಮಮೂರ್ತಿ ಅವರನ್ನು ಸಪ್ತಗಿರಿಯ ಪೂರ್ಣಾವಧಿ ಸಂಪಾದಕರನ್ನಾಗಿ ನೇಮಕಮಾಡಲಾಗಿದ್ದು ಶ್ರೀಯುತರು ಡಿಸೆಂಬರ್ 16 ರಂದು ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ.

1947 ರಲ್ಲಿ ಆಂಧ್ರಪ್ರದೇಶದ ಚಿತ್ತೂರಿನಲ್ಲಿ ಹುಟ್ಟಿದ ಶ್ರೀಯುತರು ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದಲ್ಲಿ ತಮಿಳು ಸ್ನಾತಕೋತ್ತರ ಪದವಿಯನ್ನು ಪಡೆದವರಾಗಿದ್ದು ತಮ್ಮ ವಿದ್ವತ್ಪೂರ್ಣ ಲೇಖನಗಳಿಂದ ತಮಿಳು ಧಾರ್ಮಿಕ ಸಾಹಿತ್ಯ ಪ್ರಿಯರಿಗೆ ಚಿರಪರಿಚಿತರು. ಮದರಾಸು ಆಕಾಶವಾಣಿಯಿಂದಲೂ ಅವರ ಧರ್ಮ ಧ್ವನಿ ಪರಿಚಯವಾದದ್ದೇ, ತಮಿಳಿನಲ್ಲಿ ಸಾಮಾನ್ಯರಿಗಾಗಿ ಭಗವದ್ಗೀತೆಯ ಅವರ ವ್ಯಾಖ್ಯಾನ ಜನಪ್ರಿಯ.

ಎಸ್.

ಹಾಗೂ ಕೇಂದ್ರ ಬಸ್ ನಿಲ್ದಾಣದ ಲಿಂಕ್ ಸರ್ವೀಸ್‌ಗಳನ್ನು ಹೆಚ್ಚುಗೊಳಿಸಲಾಗಿದೆ. ಈಗ ತಿರುಪತಿ ತಿರುಮಲೆಗಳ ಮಾರ್ಗದಲ್ಲಿ ಒಟ್ಟು 200 ಬಸ್‌ಗಳು ನಡೆಯುತ್ತಿವೆ. ಹೊಸದಾಗಿ ತಮಿಳುನಾಡು ಕರ್ನಾಟಕಗಳ ಮಾರ್ಗಗಳಲ್ಲಿ ಮತ್ತೂ 57 ರೂಟ್‌ಗಳಲ್ಲಿ ಬಸ್‌ಗಳನ್ನು ಆರಂಭಿಸಲಾಗುವುದು ಎಂದು ತಿಳಿದುಬಂದಿದೆ. ಈಗಾಗಲೇ ಬೆಂಗಳೂರಿನಿಂದ ನೇರವಾಗಿ ತಿರುಮಲೆಗೆ ಎ.ಪಿ.ಎಸ್. ಆರ್. ಟಿ. ಸಿ. ಬಸ್‌ಗಳು ನಡೆಯುತ್ತಿವೆ.

1975 ರಲ್ಲಿ 118 ಬಸ್‌ಗಳಿಂದ ಆರಂಭವಾದ ತಿರುಪತಿಯ ಆರ್. ಟಿ. ಸಿ. ವಿಭಾಗದಲ್ಲಿ ಈ 477 ಬಸ್‌ಗಳೂ ಆರು ಡಿಪೋಗಳೂ ಇವೆ.

ಬಿ.ಎಚ್.ಇ.ಎಲ್. ಸಂಸ್ಥೆಯೊಡನೆ ಒಪ್ಪಂದ ಮಾಡಿಕೊಂಡಂತೆ ತಿರುಪತಿ ತಿರುಮಲೆಯ ನಡುವೆ ವಿದ್ಯುತ್ ಬಸ್‌ಗಳನ್ನು ನಡೆಸುವ ಯೋಜನೆಯೂ ಇದೆ ಎಂದು ತಿಳಿದುಬಂದಿದೆ.

## ತಿರುಮಲೆಯಲ್ಲಿ ಶ್ರೀ ಎನ್.ಟಿ.ಆರ್.

ಆಂಧ್ರಪ್ರದೇಶದ ವಿಧಾನಸಭಾ ಚುನಾವಣೆಗಳ ನಂತರ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಪ್ರಸ್ತುತ ಶಾಸನ ಸಭೆಯ ಪ್ರತಿಪಕ್ಷ ನಾಯಕರೂ ತೆಲುಗುದೇಶಂ, ಅಧ್ಯಕ್ಷರೂ ಆದ ಶ್ರೀ ಎನ್.ಟಿ. ರಾಮರಾವ್ ಅವರು ಸಂದರ್ಶಿಸಿದರು.

ಸ್ವಾಮಿ ಸೇವೆಯಲ್ಲಿ ತಲೆಮುಡಿಯನ್ನು ಸಮರ್ಪಿಸಿದ ಶ್ರೀಯುತರು ಆಲಯಕ್ಕೆ ಬಂದಾಗ ಆಲಯೋಚಿತ ರೀತಿಯಲ್ಲಿ ಅವರನ್ನು ತಿ.ತಿ.ದೇ. ಜೆ.ಇ.ಓ. ಶ್ರೀ ಸಿ.ಎಚ್. ಸತ್ಯನಾರಾಯಣ ಮತ್ತಿತರರು ಸ್ವಾಗತಿಸಿದರು. ತಮ್ಮ ಪತ್ನಿ ಶ್ರೀಮತಿ ಲಕ್ಷ್ಮೀ ಪಾರ್ವತಿ ಅವರೊಡನೆ ಸುಪ್ರಭಾತ ಸೇವೆಯಲ್ಲಿ ಪಾಲುಗೊಂಡ ಶ್ರೀ ಎನ್. ಟಿ. ರಾಮರಾಯರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನ ನೀಡಲಾಯಿತು. ಸೂರ್ಯೋದಯಕ್ಕೆ ಮೊದಲು ಆಶೀರ್ವಾದ ನೀಡಬಹುದೇ ಎಂಬ ಬಗ್ಗೆ ಧರ್ಮ ಸಂದೇಹವನ್ನು ಆಲಯದ ಅರ್ಚಕರು ದೂರ ಮಾಡಿದ ನಂತರವೇ ಈ ಆಶೀರ್ವಚನ ನಡೆಯಿತು.

(ಈ ಸುದ್ದಿ ಪ್ರಕಟವಾಗುವುದರಲ್ಲಿ ಶ್ರೀಯುತರು ಆಂಧ್ರಪ್ರದೇಶದ ಮುಖ್ಯಮಂತ್ರಿಗಳಾಗಿದ್ದಾರೆ.

-- ಸಂ.)

## ನಾಟಕ ಪ್ರದರ್ಶನ

ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ನವಂಬರ್ 26 ರಂದು ತಿ.ತಿ.ದೇ. ಉದ್ಯೋಗಿಗಳ ನಾಟಕಸಂಘದ ವತಿಯಿಂದ "ಶ್ರೀಕೃಷ್ಣ ರಾಯಭಾರ" ನಾಟಕ ಪ್ರದರ್ಶಿತವಾಯಿತು. ಪ್ರೇಕ್ಷಕರ ಮನರಂಜಿಸಿದ ನಾಟಕದಲ್ಲಿ ಧರ್ಮರಾಜನ ಪಾತ್ರ ಮಾಡಿದ ಶ್ರೀ ಬಿ. ನರಸಿಂಹರಾಜು, ಹಾಗೂ ಧೃತರಾಷ್ಟ್ರನಾಗಿ ನಟಿಸಿದ ಶ್ರೀ ಕೆ. ಕೃಷ್ಣಮೂರ್ತಿ ಅವರುಗಳನ್ನು ಸಭೆಯಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕರು ಡಾ|| ಮೇಡಸಾನಿ ಮೋಹನ್ ಸತ್ಕರಿಸಿದರು. ತಿ.ತಿ.ದೇ. ಸ್ಟೀರಿಂಗ್ ಕಮಿಟಿ ನಾಯಕರು ಉದ್ಯೋಗಿಗಳು ಭಾಗವಹಿಸಿದ್ದ ಸಭೆಯ ಅಧ್ಯಕ್ಷತೆಯನ್ನು ನಾಟಕ ಸಂಘದ ಅಧ್ಯಕ್ಷರು ಶ್ರೀ ಸಿ. ರಮಣ ಅವರು ವಹಿಸಿದ್ದರು.

## ತಿರುಚಾನೂರಿನಲ್ಲಿ ವೈಭವದ ಬ್ರಹ್ಮೋತ್ಸವ

ತಿರುಚಾನೂರಿನಲ್ಲಿ 28-11-94 ರಿಂದ 7-12-94 ರ ವರೆಗೆ ಶ್ರೀಪದ್ಮಾವತೀಅಮ್ಮನವರ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದು ಸಂಪನ್ನವಾದವು. ತದಂಗವಾಗಿ 3-12-94 ರಂದು ಅಮ್ಮನವರ ಗಜವಾಹನೋತ್ಸವವೂ, 4-12-94 ರಂದು ಗರುಡೋತ್ಸವವೂ ನಡೆದವು. 6-12-94 ರಂದು ಅಮ್ಮನವರ ರಥೋತ್ಸವಕ್ಕೆ ಬಹುಮಂದಿ ಭಕ್ತರು ಅಮ್ಮನವರಿಗೆ ಜಯಘೋಷ ಹೇಳುತ್ತ ರಥವನ್ನು ಎಳೆದು ಧನ್ಯರಾದರು.

7-12-94 ರಂದು ಪಂಚಮೀ ತೀರ್ಥ. ಅಂದು ತಿರುಮಲೆಯಿಂದ ಹರಿದ್ರಾಕುಂಕುಮದ ಆಗಮನ. ತಿರುಪತಿಯಲ್ಲಿ ಪಡಿಯ ಊರಮೆರವಣಿಗೆ. ಆನೆಯ ಮೇಲೆ ಅವುಗಳು ತಿರುಚಾನೂರಿಗೆ ಬಂದಾಗ ವಿಶೇಷ ಜನಸಂದಣಿ. ತಿ.ತಿ.ದೇ. ಅಧ್ಯಕ್ಷ ಶ್ರೀ ಆಕೆಪಾಟಿ ಚೆಂಗಲ್‌ರೆಡ್ಡಿ, ಬೋರ್ಡ್ ಸದಸ್ಯರು ಶ್ರೀ ನಾಚು ಶೇಷಗಿರಿ ರಾವ್, ಶ್ರೀ ಶ್ರೀರಾಮಮೂರ್ತಿ ಮೊದಲಾದವರೊಡನೆ ಹಲವಾರು ಅಧಿಕಾರಿಗಳೂ ನೆರೆದಿದ್ದರು. ಅಮ್ಮನವರ ಪಂಚಲೋಹ ವಿಗ್ರಹದೊಡನೆ ಚಕ್ರಸ್ನಾನ. ಸುಮಾರು ನಲವತ್ತು ಸಾವಿರಕ್ಕೂ ಹೆಚ್ಚು ಮಂದಿ ಭಕ್ತರು ತುಂಬಿದ್ದ ಪಂಚಮೀ ತೀರ್ಥದಲ್ಲಿ ತಿರುಚಾನೂರಿನ ಪದ್ಮಸರೋವರ ಭಕ್ತರಿಂದ ತುಂಬಿಹೋಗಿದ್ದಿತು ಎಂದು ಹೇಳಬಹುದು. ಅಮ್ಮನವರ ನೀರಾಟವಾದಮೇಲೆ ಭಕ್ತರೂ ಸ್ನಾನಮಾಡಿ ಒದ್ದೆ ಬಟ್ಟೆ



## ತಿ.ತಿ.ದೇ. ಮುದ್ರಣಾಲಯಕ್ಕೆ ನೂತನ ಮ್ಯಾನೇಜರ್

ತಿ.ತಿ.ದೇವಸ್ಥಾನಗಳ ಮುದ್ರಣಾಲಯದ ಮ್ಯಾನೇಜರ್ ಹುದ್ದೆಗೆ ಶ್ರೀ ಪಿ. ಮೋಹನ್ ರಾವ್ ಅವರನ್ನು ನೇಮಕ ಮಾಡಲಾಗಿದೆ.

ಶ್ರೀಯುತರು ತಿ.ತಿ.ದೇ. ಪ್ರೆಸ್‌ನಲ್ಲಿಯೇ ಅಸಿಸ್ಟೆಂಟ್ ಮ್ಯಾನೇಜರ್ ಆಗಿ ಕೆಲಸ ಮಾಡುತ್ತ ಪದೋನ್ನತಿ ಪಡೆದು ಈಗ ಮ್ಯಾನೇಜರ್ ಆಗಿದ್ದಾರೆ. ಸಾಂಪ್ರದಾಯಕ ಪ್ರಿಂಟಿಂಗ್ ವಿಧಾನಗಳಲ್ಲೂ, ಆಧುನಿಕ ಯಾಂತ್ರೀಕೃತ ಮುದ್ರಣ ವಿಧಾನದಲ್ಲೂ ನಿಷ್ಣಾತರಾದ ಶ್ರೀಯುತರು ಡಿಸೆಂಬರ್ 17 ರಂದು ಶನಿವಾರ ಪದವಿಯನ್ನು ಸ್ವೀಕರಿಸಿದ್ದಾರೆ.

ಯಲ್ಲಿ ಆಲಯಕ್ಕೆ ಬಂದು ಅಮ್ಮನವರನ್ನು ದರ್ಶನ ಮಾಡಿದರು.

### ಧರ್ಮಸ್ಥಳದ ಬಾಹುಬಲಿಯು ಮಹಾ ಮಸ್ತಕಾಭಿಷೇಕ -- ಫೆ--5--10

ಮಂಜುನಾಥ ಕ್ಷೇತ್ರವೆಂದು ಖ್ಯಾತವಾಗಿರುವ ಕರ್ನಾಟಕದ ಧರ್ಮಸ್ಥಳದಲ್ಲಿನ ರತ್ನಗಿರಿಯಲ್ಲಿನ ಶ್ರೀ ಬಾಹುಬಲಿಗೆ 1995 ನೇ ಫೆಬ್ರವರಿ 5 ರಿಂದ 10 ರ ವರೆಗೆ ಮಹಾಮಸ್ತಕಾಭಿಷೇಕ ನಡೆಯುವಂತೆ ಏರ್ಪಾಡುಗಳು ಭರದಿಂದ ವ್ಯವಸ್ಥಿತವಾಗುತ್ತಿವೆ.

1982 ರಲ್ಲಿ ಸ್ಥಾಪಿತವಾದ ಈ ಬಾಹುಬಲಿ ಮೂರ್ತಿ ಆಕರ್ಷಕವಾಗಿದ್ದು, ಆಧುನಿಕ ಕಾಲದ ಒಂದು ಪವಾಡವೆಂಬಂತೆ ರತ್ನಗಿರಿಯಲ್ಲಿ ಸ್ಥಿತವಾಗಿ ದೂರಕ್ಕೂ ಕಾಣುವ ಉನ್ನತ ಮೂರ್ತಿಯಾಗಿ ನೋಡುಗರ ಮನದಲ್ಲಿ ನಿಲ್ಲುವ ಸೌಷ್ಟವ ದಿವ್ಯತೆಗಳನ್ನು ಹೊಂದಿರುವುದೊಂದು ವಿಶೇಷ.

ಪ್ರಥಮ ಮಹಾ ಮಸ್ತಕಾಭಿಷೇಕದಲ್ಲಿ ವಿವಿಧ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇದ್ದು, ದೇಶವಿದೇಶಗಳಿಂದ ಹೆಚ್ಚಿನ ಯಾತ್ರಿಕ ಸಂದಣಿಯನ್ನು ನಿರೀಕ್ಷಿಸಲಾಗಿದ್ದು, ಎಲ್ಲರ ಸೌಲಭ್ಯಗಳನ್ನೂ ಶಾಂತಿ ಭದ್ರತೆಯ ವ್ಯವಸ್ಥೆಗಳನ್ನೂ ಸಕ್ರಮಗೊಳಿಸಲು ಪ್ರಯತ್ನಗಳು ನಡೆದಿವೆ. ಇಡೀ ಮಹಾಮಸ್ತಕಾಭಿಷೇಕ ಕಾರ್ಯಕ್ರಮ ಆಚಾರ್ಯ ಶ್ರೀ ವರ್ಧಮಾನಸಾಗರ ಮಹಾರಾಜರ ನೇತೃತ್ವದಲ್ಲಿ ನಡೆಯುವುದು.

(ಕೃಪೆ -- ಮಂಜುವಾಣಿ.)

ಹಸಿರಿದ್ದರೆ ಉಸಿರು

ಹಸಿರಿದ್ದರೆ ಉಣಿಸು

ಹಸಿರಿದ್ದರೆ ನೀರು

## ವೃಕ್ಷೋ ರಕ್ಷತಿ ರಕ್ಷಿತಃ

ಗಿಡಗಳನ್ನು ಕಾಪಾಡಿರಿ

ಮಾನವ ಪರಿಸರವನ್ನು

ಕಾಪಾಡಿದಂತಾಗುತ್ತದೆ.



### ಅನಂತಮೂರ್ತಿ ಅವರಿಗೆ ಜ್ಞಾನಪೀಠ ಪ್ರಶಸ್ತಿ

ಕನ್ನಡದ ಖ್ಯಾತ ಕಾದಂಬರಿಕಾರ, ವಿಮರ್ಶಕ ಆಂಗ್ಲ ಅಧ್ಯಾಪಕ ಡಾ|| ಉಡುಪಿ ರಾಜಗೋಪಾಲಾಚಾರ್ಯ ಅನಂತಮೂರ್ತಿ ಅವರಿಗೆ 1994 ರಲ್ಲಿನ ಭಾರತೀಯ ಜ್ಞಾನಪೀಠ ಪ್ರಶಸ್ತಿ ಅವರ ಈ ಹಿಂದಿನ ಹತ್ತು ವರ್ಷಗಳ ಸಾಹಿತ್ಯ ಸಾಧನೆಗಾಗಿ ದೊರೆತಿದೆ.

ಸಂಸ್ಕಾರ, ಅವಸ್ಥೆ, ಭಾರತೀಪುರ, ಭವ, ಕಾದಂಬರಿಗಳನ್ನೂ, ಪ್ರಜ್ಞೆ ಮತ್ತು ಪರಿಸರ, ಪೂರ್ವಾಪರ, ಸಮಕ್ಷಮ, ಸನ್ನಿವೇಶ ವಿಮರ್ಶಾ ಸಂಕಲನಗಳನ್ನೂ, ಅಜ್ಜನ ಹೆಗಲ ಸುಕ್ಕುಗಳು, ಮೊದಲಾದ ಕವನ ಸಂಕಲನಗಳನ್ನೂ ಹಲವಾರು ಕಥಾ ಸಂಕಲನಗಳನ್ನೂ ಪ್ರಕಟಿಸಿರುವ ಡಾ|| ಅನಂತಮೂರ್ತಿ ಅವರು ಶಿವಮೊಗ್ಗೆಯ ಮೇಳಿಗೆಯಲ್ಲಿ 1932 ರ ಡಿಸೆಂಬರ್ 21 ಹುಟ್ಟಿ ಮೈಸೂರಿನ ಮಾನಸಗಂಗೋತ್ರಿಯಲ್ಲಿ ಆಂಗ್ಲ ಅಧ್ಯಾಪಕರಾಗಿ, ಕೊಟ್ಟಾಯಂನ ಗಾಂಧಿ ವಿಶ್ವವಿದ್ಯಾಲಯದ ಉಪಕುಲ ಪತಿಗಳಾಗಿ, ನ್ಯಾಷನಲ್ ಬುಕ್ ಟ್ರಸ್ಟ್‌ನ ಅಧ್ಯಕ್ಷರಾಗಿ, ಸಧ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ವೇದೋಪನಿಷತ್ತುಗಳನ್ನೂ ಭಾರತೀಯ ಪರಂಪರೆಯನ್ನೂ ಅದರೊಳಗಿನಿಂದಲೇ ನಿಕಷಕ್ಕೆಒಡ್ಡಿ ಅನುಭವದ ವೈವಿಧ್ಯವನ್ನೂ ಅರ್ಥವನ್ನೂ ಅರಿಯುವ ಪ್ರಯತ್ನದ ಸಾಹಿತ್ಯ ನಿರ್ಮಾಣ, ಅವರ ಮುಖ್ಯ ಕಸುಬು ಎಂದು ಹೇಳಬಹುದು.

ಅವರಿಂದ ಮತ್ತೂ ಮೌಲ್ಯಯುತ ಸಾಹಿತ್ಯ ಹೊರಬರಲು ಜ್ಞಾನಪೀಠ ಪ್ರಶಸ್ತಿ ಪ್ರೇರಕವಾಗಲಿ ಎಂದು ಸಪ್ತಗಿರಿ ಹಾರೈಸುತ್ತದೆ. --ಸಂ||

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಫೆಬ್ರವರಿ 1995

**ವಾದಿರಾಜರು -- ಹಯವದನ**

--ಕೆ. ಆರ್. ಗೋಪಾಲಕೃಷ್ಣ

**ಮಧ್ವಾಚಾರ್ಯರ ಕೊಡುಗೆ**

--ಡಾ|| ವಿ. ಎಸ್. ಶೇಷಗಿರಿರಾವ್

**ಮಧ್ವಜೀವನ**

-- ಆದ್ಯರಾಮಾಚಾರ್ಯ

**ವ್ಯಾಸರು -- ವೇದಗಳು.**

--ಕೆ. ಸಿ. ರಾಮಚಂದ್ರಶರ್ಮ

**ಉಪನಿಷತ್ತುಗಳ ಮೂಲತತ್ತ್ವ**

--ರಘುಸುತ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕುರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. / ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ --- 1995

| | | |
|---|---|---|
| 6-2-95 | ಸೋಮವಾರ | ರಥ ಸಪ್ತಮಿ. |
| 9-2-95 | ಗುರುವಾರ | ಮಧ್ವ ನವಮಿ. |
| 11-2-95 | ಶನಿವಾರ | ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ. |
| 15-2-95 | ಬುಧವಾರ | ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ. |
| 19-2-95 | ಭಾನುವಾರ | ಶ್ರೀನಿವಾಸ ಮಂಗಾಪುರದಲ್ಲಿ ಬ್ರಹ್ಮೋತ್ಸವದ ಧ್ವಜಾರೋಹಣ. |
| 23-2-95 | ಗುರುವಾರ | ಶ್ರೀನಿವಾಸ ಮಂಗಾಪುರದಲ್ಲಿ ಗರುಡೋತ್ಸವ. |
| 26-2-95 | ಭಾನುವಾರ | ಶ್ರೀನಿವಾಸ ಮಂಗಾಪುರದಲ್ಲಿ ರಥೋತ್ಸವ. |
| 27-2-95 | ಸೋಮವಾರ | ಕಪಿಲೇಶ್ವರಸ್ವಾಮಿ ನಂದಿವಾಹನೋತ್ಸವ. ಮಹಾಶಿವರಾತ್ರಿ. |
| 28-2-95 | ಮಂಗಳವಾರ | ಕಪಿಲಶ್ವರಸ್ವಾಮಿ ಕಲ್ಯಾಣೋತ್ಸವ. |

(36 ನೇ ಪುಟದಿಂದ)

ಈ ರಾಶಿಯವರಿಗೆ ಆರಂಭದಲ್ಲಿ ಶನಿಯಿಂದಾಗಿ ಸ್ವಲ್ಪ ತೊಂದರೆಗಳುಂಟಾದರೂ ಜೂನ್, ಜುಲೈ ತಿಂಗಳುಗಳ ನಂತರ ಎಲ್ಲವೂ ಸವ್ಯವಾಗಿ ನಡೆಯುತ್ತದೆ. ಕೋರ್ಟು ಕಚೇರಿ ಕೆಲಸಗಳು ಸಾಫಿಯಾಗಿ ಮುಕ್ತಾಯಗೊಳ್ಳುತ್ತವೆ. ಮನೆಯಲ್ಲೂ ತನುವಿನಲ್ಲೂ ಆರೋಗ್ಯದ ಪ್ರಶ್ನೆಗಳುಂಟಾಗಿ ಸ್ವಲ್ಪ ವೆಚ್ಚಕ್ಕೆ ದಾರಿಯಾಗುತ್ತದೆ. ಆರಂಭದಲ್ಲಿ ಸ್ವಲ್ಪ ಮಟ್ಟಿಗೆ ಪ್ರಯತ್ನಕಾರ್ಯಜಯ, ಪ್ರಯಾಣದ ಮೂಲಕ ಲಾಭವುಂಟು. ಹಿರಿಯರ ನೆರವು ದೊರೆಯುತ್ತದೆ. ಮಧ್ಯಕಾಲದಲ್ಲಿ ಅಕಸ್ಮಾತ್ತಾಗಿ ಉಂಟಾಗುವ ವೆಚ್ಚಗಳು, ಅಪಾಯಭೀತಿಯಿರುತ್ತವೆ. ಆದರೆ ವರ್ಷಾಂತ್ಯದ ಹೊತ್ತಿಗೆ ಪರಿಸ್ಥಿತಿ ಸರಿಯಾಗಿ ಸಂತೃಪ್ತಿಯನ್ನು ನೀಡಬಲ್ಲದು. ಆಧ್ಯಾತ್ಮಿಕ ಪ್ರಗತಿ ಕಂಡುಬರುತ್ತದೆ. ಸಾಹಸ ಕಾರ್ಯಗಳಲ್ಲಿ ವಿಜಯವುಂಟಾಗುತ್ತದೆ. ಮನೆಯಲ್ಲಿ ಶುಭಕಾರ್ಯ ಪ್ರಯತ್ನಗಳು ಸಾನುಕೂಲವಾಗಿ ನಡೆಯುತ್ತವೆ. ವಿದ್ಯಾರ್ಥಿಗಳು, ಉದ್ಯೋಗಿಗಳು, ಲಾಯರುಗಳಿಗೆ ಈ ವರ್ಷ ಸಾಮಾನ್ಯವಾಗಿ ಕಳೆಯುತ್ತದೆ. ಒಟ್ಟಿನಲ್ಲಿ ಎರಡು ಪಾಲು ಶುಭಫಲಗಳು ಅನುಭವಕ್ಕೆ ಬರುವ ವರ್ಷವಿದು.

### ಮೀನ

ಪೂರ್ವಾಭಾದ್ರ 4, ಉತ್ತರಾಭಾದ್ರ, ರೇವತಿ

(ಮಾರ್ಚಿ 15, ಏಪ್ರಿಲ್ 15)

ಈ ರಾಶಿಯವರಿಗೆ ಗುರುಬಲ ಈ ವರ್ಷ ಚೆನ್ನಾಗಿದೆ. ವಿವಾಹಯೋಗ್ಯರಾದ ಯುವತೀ ಯುವಕರಿಗೆ ತಕ್ಕ ಸಂಬಂಧಗಳು ಬರಬಹುದು. ವಿವಾಹಿತರಿಗೆ ಸಂತಾನ ಸೂಚನೆಯೂ ಉಂಟು. ಈ ವರ್ಷದಲ್ಲಿ ವ್ಯರ್ಥ ವೆಚ್ಚ, ಅಂದುಕೊಳ್ಳದ ಪ್ರಯಾಣಗಳಿಂದ ತೊಂದರೆ, ಆರೋಗ್ಯ ಅಪ್ಪಕಷ್ಟೆ, ಸಾಹಸಕಾರ್ಯಗಳು ಸೆಪ್ಟಂಬರ್ ನಂತರ ಫಲದಾಯಕ. ಆಧ್ಯಾತ್ಮಿಕ ಪ್ರಗತಿ ಸಾಧಿಸಲು ಅನುಕೂಲದ ಸಮಯ. ತೀರ್ಥಯಾತ್ರೆ ಸುಮುಖವಾಗಿ ನಡೆಯುತ್ತದೆ. ಕುಟುಂಬದ ಆರೋಗ್ಯ ಪರಿಸ್ಥಿತಿ ಮೇಲುಕೆಳಗಾಗಿ ಕಂಡುಬಂದರೂ ಅಷ್ಟಾಗಿ ನೋವನ್ನುಂಟುಮಾಡದು. ಸ್ವಂತ ಆರೋಗ್ಯ ಚೆನ್ನ. ಸಾಲವಿದ್ದರೂ ಬಾಧೆಯಿಲ್ಲ. ಅನವಸರವಾದ ಜಗಳದಲ್ಲಿ ತಲೆ ದೂರಿಸದಿರುವುದು ಒಳಿತು. ವಿದ್ಯಾರ್ಥಿಗಳಲ್ಲಿ ಸಾಮಾನ್ಯ ಪ್ರಗತಿಯುಂಟು. ಉದ್ಯೋಗಿಗಳಿಗೆ ವರ್ಗಾವಣೆಯುಂಟು. ಕ್ರೀಡಾಕಾರರಿಗೆ, ಕಲಾವಿದರಿಗೆ ವರ್ಷದ ಎರಡನೆ ಭಾಗ ಅನುಕೂಲ. ಒಟ್ಟಿನಲ್ಲಿ ಈ ವರ್ಷ ಸಾಮಾನ್ಯವಾಗಿ ನಡೆಯುತ್ತದೆ.

Edited and published on behalf of T.T. Devasthanams by N. S. Rama Murthy, M.A., and Printed at T.T.D. Press by P. Mohan Rao, Manager, T.T.D. Press, Tirupati - 517 507.

